श्रीः

# शब्दार्थकौस्तुभः

(प्रायौगिक संस्कृत-कर्णाटक शब्दकोशः)

# ಸಂಸ್ಕೃತ-ಕನ್ನಡ ಶಬ್ದಕೋಶ

ಪ್ರಥಮ ಭಾಗ

ಪದಗಳು: ಅ—ತಹ್ಲ

ಮುನ್ನುಡಿ:
ಲೋಕಶಿಕ್ಷಣ ಟ್ರಸ್ಟಿನ ಸಂಸ್ಥಾಪಕರಾದ
ಶ್ರೀ ಆರ್. ಆರ್. ದಿವಾಕರ, ಎಂ.ಎ., ಎಲ್‌ಎಲ್.ಬಿ.
ಅವರಿಂದ

ಗ್ರಂಥಕರ್ತ—ಪ್ರಕಾಶಕ:
ಸಾಹಿತ್ಯ ವಿದ್ವಾನ್
ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ
ಸಾಹಿತ್ಯಾಧ್ಯಾಪಕ
ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜು
ಬೆಂಗಳೂರು

श्रीः

# शब्दार्थकौस्तुभः

(प्रायौगिक संस्कृत-कर्णाटक शब्दकोशः)

## ಸಂಸ್ಕೃತ-ಕನ್ನಡ ಶಬ್ದಕೋಶ

ಪ್ರಥಮ ಭಾಗ

**ಪದಗಳು: अ–उह्**

ಮುನ್ನುಡಿ:
ಲೋಕಶಿಕ್ಷಣ ಟ್ರಸ್ಟಿನ ಸಂಸ್ಥಾಪಕರಾದ
**ಶ್ರೀ ಆರ್. ಆರ್. ದಿವಾಕರ,** ಎಂ.ಎ., ಎಲ್‌ಎಲ್.ಬಿ.
ಅವರಿಂದ

ಗ್ರಂಥಕರ್ತ–ಪ್ರಕಾಶಕ:
**ಸಾಹಿತ್ಯ ವಿದ್ವಾನ್**
**ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ**
ಸಾಹಿತ್ಯಾಧ್ಯಾಪಕ
ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜು
**ಬೆಂಗಳೂರು**

ಪ್ರತಿಗಳು ದೊರೆಯುವ ಸ್ಥಳ:

ಸಾಹಿತ್ಯ ವಿದ್ವಾನ್

**ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ**

ಗ್ರಂಥಕರ್ತ-ಪ್ರಕಾಶಕ, "ಸಂಸ್ಕೃತ-ಕನ್ನಡ ಶಬ್ದಕೋಶ"

199, ನಾಯಕ ಚಾಲ್, ಗವಿಪುರಂ-ಗುಟ್ಟಹಳ್ಳಿ

**ಬೆಂಗಳೂರು-19**

*Copies can be had of·*

SAHITYA VIDWAN

CHAKRAVARTHI SRINIVASA GOPALACHARYA

*Author-Editor, "Samskrita-Kannada Dictionary"*

199, NAIK CHAL, GAVIPURAM-GUTTAHALLI

BANGALORE-19

# शब्दार्थकौस्तुभः

A PRACTICAL

# SAMSKRITA-KANNADA DICTIONARY

## VOLUME I

WORDS : अ–उह्ल

FOREWORD
BY
Sri. R. R. DIWAKAR
*Founder and Sole Trustee, Loka Shikshana Trust, Hubli*

*Compiled, Edited and Published*
*by*
*Sahitya Vidwan*
CHAKRAVARTHI SRINIVASA GOPALACHARYA
*Assistant Professor of Sahitya*
*Sri Chamarajendra Samskrita College*
*BANGALORE*

1961
BANGALORE PRESS
MYSORE ROAD, BANGALORE-18

*Author-Editor and Publisher*
*Sahitya Vidwan*
CHAKRAVARTHI SRINIVASA GOPALACHARY
*Assistant Professor of Sahitya*
*Sri Chamarajendra Samskrita College*
*BANGALORE*



**Price Rs. 75=00**
*(For Complete Set of 2,500 Pages in 5 Volumes)*
*OCTOBER 1961*

PRINTED BY
SRI. T. K. BALAKRISHNAN
SUPERINTENDENT
BANGALORE PRESS, MYSORE ROAD
BANGALORE 18

G. Sewajitha
Gorur
19.2.62

# शब्दार्थकौस्तुभः

## ಪ್ರಾಯೌಗಿಕ
## ಸಂಸ್ಕೃತ–ಕನ್ನಡ ಶಬ್ದಕೋಶ

ಇದರಲ್ಲಿ ನಲವತ್ತು ಸಾವಿರಕ್ಕೂ ಹೆಚ್ಚು ಪದಗಳು ಸೇರಿಸಲ್ಪಟ್ಟಿವೆ. ಪದಗಳಿಗೆ ಲಿಂಗನಿರ್ದೇಶನ ಮತ್ತು ವ್ಯಾಕರಣರೀತ್ಯಾ ವ್ಯುತ್ಪತ್ತಿಪ್ರದರ್ಶನದೊಡನೆ ಅರ್ಥವಿವರಣೆ, ಸಾಹಿತ್ಯ, ತರ್ಕ, ವ್ಯಾಕರಣ, ವೇದಾಂತ, ಜ್ಯೋತಿಷ ಮೊದಲಾದ ಎಲ್ಲಾ ಶಾಸ್ತ್ರಗಳಿಗೂ ಸಂಬಂಧಿಸಿದ ಪದಗಳಿಗೆ ವಿಶೇಷ ಅರ್ಥವಿವರಣೆ, ಕಾವ್ಯ ನಾಟಕಾದಿಗಳಲ್ಲಿನ ಪ್ರಯೋಗೋದಾಹರಣೆಗಳು, ಪೌರಾಣಿಕ ವ್ಯಕ್ತಿಗಳ ಸಂಕ್ಷಿಪ್ತ ಪರಿಚಯ, ವಿಶೇಷ ಪ್ರಯೋಗದಲ್ಲಿರುವ ಮುಖ್ಯ ಧಾತುಗಳ ರೂಪಗಳು, ಇವುಗಳಿಗೆ ಉಪಸರ್ಗಗಳ ಯೋಗದಿಂದುಂಟಾಗುವ ಅರ್ಥಭೇದಗಳು ಮತ್ತು ಪರಿಶಿಷ್ಟದಲ್ಲಿ ಆಧುನಿಕ ವ್ಯವಹಾರೋಪಯೋಗಿಯಾದ ಸರ್ಕಾರದ ನಾನಾ ಇಲಾಖಾಧಿಕಾರಿಗಳು, ವಾಣಿಜ್ಯ, ವಿಜ್ಞಾನ ಇವುಗಳಿಗೆ ಸಂಬಂಧಿಸಿದ ಇಂಗ್ಲಿಷ್ ಪದಗಳಿಗೆ ಸಂಸ್ಕೃತ ಮತ್ತು ಕನ್ನಡ ಸಮಾನ ಪದಗಳು ಇವೆಲ್ಲವೂ ಸೇರಿವೆ.

*A Practical*

## SAMSKRITA-KANNADA DICTIONARY

Contains more than 40,000 classical words with derivations, Kannada equivalents and usages and words relating to various Sastras,—Sahitya, Tarka, Vyakarana, Vedantha, Astrology, etc., with explanations, some important selected roots with inflexions and Samskrita and Kannada equivalents to some important words pertaining to Science, Commerce, Government Officers of various branches, etc., in the Appendix.

# FOREWORD

R. R. Diwakar,
*Founder and Sole Trustee,*
*Loka Shikshana Trust, Hubli*
*and*
*Chairman, Gandhi Smaraka Nidhi*

*Camp:* Bangalore,
19*th August* 1961.

I HAVE known Shri Chakravarthi Srinivasa Gopalacharya, the Author-Editor of this *Samskrita-Kannada Dictionary*, for a long time. He has kept me informed of the huge efforts he has been making for publishing this "Life's Labour" as well as "Love's Labour" of his. I am glad to see that the first volume of about five hundred pages is now in the hands of the readers as a result of his persistent and unflagging endeavour.

Though not adequate, the financial support he has now got has at least made it possible for him to start publishing the work. It has encouraged him, and given him as well as the public full hope that this comprehensive and very useful Dictionary of 2,500 pages will see the light of day early enough.

As far as I know, this is the first work of its kind, so scholarly and of such dimensions in Karnataka. Kannada public will ever remain grateful for the undertaking which the author has now been able to bring to near completion by his ceaseless and steady toil.

Throughout, the author has used the Kannada script and the Indian numerals in their international form (as per our Constitution), except with reference to Sanskrit words and quotations, where he has used the Devanagari script. The knowledge of both the scripts therefore is necessary for the use of this great work, and I think it is as it should be.

I have no doubt that as days pass by, the very logic of the situation will persuade those who want to study Indian Culture and tradition as well as those who want to enrich and develop their own language, to study Sanskrit more and more. To us, Indians, Sanskrit is not merely an ancient language nor a language among many languages. It is the repository of a great world heritage; it is the language of a continuous and vital culture which is even now creative. It is at once a treasure-house and a golden quarry too for building up our own languages.

This Dictionary, therefore, has not come too soon for us. It is extremely useful to every Kannada student of Sanskrit. It is as useful to Sanskrit scholars and pandits who would like to render or present Sanskrit thoughts and works into Kannada. Kannada readers and writers can also with great advantage use this book for developing an exhaustive and accurate vocabulary in their own language.

I must say that the author has laboured hard and long. He has given root-meanings, quoted authorities in grammar, cited numerous and appropriate quotations from literary as well as other Sanskrit works and thus enriched the book not merely by words but by basic thoughts in the Sanskrit language.

Let me wish that the publication of other volumes follows suit in quick succession and adds a valuable aid to students of Kannada and Sanskrit in Karnataka.

R. R. Diwakar.

# ಮುನ್ನುಡಿ

ಶ್ರೀ ಆರ್. ಆರ್. ದಿವಾಕರ, ಎಂ.ಎ., ಎಲ್‌ಎಲ್.ಬಿ.,
ಲೋಕಶಿಕ್ಷಣ ಟ್ರಸ್ಟಿನ ಸಂಸ್ಥಾಪಕರು,
ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರು ಮತ್ತು
ಬಿಹಾರಿನ ವಿಶ್ರಾಂತ ರಾಜ್ಯಪಾಲರು

ಬೆಂಗಳೂರು,
19 ಆಗಸ್ಟ್ 1961.

ಈ "ಸಂಸ್ಕೃತ-ಕನ್ನಡ ಶಬ್ದಕೋಶ"ದ ಲೇಖಕರೂ, ಸಂಪಾದಕರೂ ಆದ ಶ್ರೀ ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯರನ್ನು ಬಹುಕಾಲದಿಂದಲೂ ನಾನು ಚೆನ್ನಾಗಿ ಬಲ್ಲೆ. ಅವರು ತಾವು ಕೈಕೊಂಡ ಈ ಮಹಾ ಪ್ರಯತ್ನದ ವಿಷಯವಾಗಿ ಮೇಲಿಂದ ಮೇಲೆ ನನಗೆ ತಿಳಿಸುತ್ತ ಬಂದಿದ್ದಾರೆ. ಇದೊಂದು ಜೀವಮಾನದ ಕೆಲಸ. ಪ್ರೇಮದಿಂದ ಪ್ರೇರಿತರಾಗಿ ಮಾಡುವ ಕೆಲಸ. ಇಂಥ ಕಾರ್ಯವನ್ನು ಅವ್ಯಾಹತವಾಗಿ ನಡೆಸಿ ಶಬ್ದಕೋಶದ ಪ್ರಥಮ ಸಂಪುಟ (ಸುಮಾರು 500 ಪುಟಗಳು) ವನ್ನು ಓದುಗರ ಕೈಗೆ ಒದಗಿಸುತ್ತಿರುವುದು ಸಂತೋಷದ ವಿಷಯವಾಗಿದೆ.

ಈ ಗ್ರಂಥಪ್ರಕಟನೆಗೆ ಈಗ ಅಲ್ಪ ಸಾಹಾಯ್ಯವು ದೊರಕಿದ್ದು, ಅದು ಸಾಕಷ್ಟು ಇಲ್ಲದಿದ್ದರೂ, ಪ್ರಕಟನಾ ಕಾರ್ಯ ಪ್ರಾರಂಭಿಸಲು ಆದರಿಂದ ಶಕ್ಯವಾಗಿದೆ. ಲೇಖಕರೂ ಸಾಹಾಯ್ಯದಿಂದ ಪ್ರೋತ್ಸಾಹ ಪಡೆದಿದ್ದಾರೆ. ಇದರಿಂದ ಜನತೆಗೂ, ಲೇಖಕರಿಗೂ ಅವರ 2,500 ಪುಟಗಳ ಬೃಹತ್ಕೃತಿಯು ಪ್ರಕಾಶಪಡೆದೀತೆಂಬ ಆಶೆ ಬಲಗೊಂಡಿದೆ.

ನನಗೆ ತಿಳಿದಮಟ್ಟಿಗೆ ಇಷ್ಟೊಂದು ಪಾಂಡಿತ್ಯಪೂರ್ಣವಾದ, ವೈವಿಧ್ಯಪೂರ್ಣ ನವಮುಖಗಳಿಂದ ಕೂಡಿದ, ಇಂಥ ಕೃತಿಯು ಕರ್ಣಾಟಕದಲ್ಲಿಯೇ ಪ್ರಥಮವಾಗಿದೆ. ಈ ಶಬ್ದಕೋಶವನ್ನು ತಮ್ಮ ಅವ್ಯಾಹತ ಪ್ರಯತ್ನದಿಂದ ಸುಪಾರಾಗಿ ಪೂರ್ಣಗೊಳಿಸಿದ ಲೇಖಕರಿಗೆ ಕನ್ನಡಿಗರು ನಿರಂತರವಾಗಿ ಕೃತಜ್ಞರಾಗುವದರಲ್ಲಿ ಸಂದೇಹವಿಲ್ಲ.

ಗ್ರಂಥದುದ್ದಕ್ಕೂ ಲೇಖಕರು ಕನ್ನಡಲಿಪಿಯನ್ನು ಬಳಸಿದ್ದಾರೆ. ನಮ್ಮ ಸಂವಿಧಾನದಲ್ಲಿ ನಿರ್ದೇಶಿಸಿದಂತೆ ಅಂಕಿಗಳನ್ನು ಅಂತರರಾಷ್ಟ್ರೀಯ ಸ್ವರೂಪದಲ್ಲಿ ಬಳಸಿದ್ದಾರೆ. ಸಂಸ್ಕೃತ ಶಬ್ದ ಮತ್ತು ಉದಾಹರಣೆಗಳಿಗೆ ಸಂಬಂಧಿಸಿದ ಪ್ರಸಂಗಗಳಲ್ಲಿ ಮಾತ್ರ ದೇವನಾಗರಿ ಬಳಸಿದ್ದಾರೆ. ಆದ್ದರಿಂದ ಈ ಗ್ರಂಥ ಬಳಸಲು ಈ ಎರಡು ಲಿಪಿಗಳ ಜ್ಞಾನವೂ ಅವಶ್ಯವಾಗಿದೆ. ಅದು ಹಾಗಿರುವುದೂ ಒಳ್ಳೆಯದೇ.

ಕಾಲ ಕಳೆದಂತೆ, ಭಾರತೀಯ ಸಂಸ್ಕೃತಿ, ಸಂಪ್ರದಾಯಗಳನ್ನು ಅಭ್ಯಾಸಮಾಡಬಯಸುನವರು, ತಮ್ಮ ಪ್ರಾದೇಶಿಕ ಭಾಷೆಗಳನ್ನು ಬೆಳಸಿ, ಸಮೃದ್ಧಿಗೊಳಿಸಬೇಕೆನ್ನುವವರು ಸಂಸ್ಕೃತವನ್ನು ಹೆಚ್ಚುಹೆಚ್ಚಾಗಿ ಕಲಿಯಬೇಕಾಗುವುದು ಅನಿವಾರ್ಯವಾಗುವದು. ಪರಿಸ್ಥಿತಿಯೇ ಆ ರೀತಿ ನಿರ್ಮಾಣವಾಗುವುದೆಂಬಲ್ಲಿ ನನಗೆ ಸಂಶಯವಿಲ್ಲ. ಭಾರತೀಯರಾದ ನಮಗಂತೂ ಸಂಸ್ಕೃತವು ಕೇವಲ ಪ್ರಾಚೀನ ಭಾಷೆಯಲ್ಲ: ಅನೇಕ ಭಾಷೆಗಳಲ್ಲಿ ಇದೊಂದು ಎನ್ನುವಂತಿಲ್ಲ. ಅದು ವಿಶ್ವದ ಮಹಾ ಸಾಂಸ್ಕೃತಿಕ ಪರಂಪರೆಯನ್ನು ಕಾಯು ಕೊಂಡಿದೆ. ಈ ಭಾಷೆಯು ಅಖಂಡವಾಗಿ ಬೆಳೆಯುತ್ತ ಬಂದಿದೆ. ಚೈತನ್ಯಯುತ ಸಂಸ್ಕೃತಿಯುಳ್ಳದ್ದಾಗಿದೆ. ಈ ಸಂಸ್ಕೃತಿಯು ಇಂದಿಗೂ ಕ್ರಿಯಾತ್ಮಕವಾಗಿದೆ. ಸಂಸ್ಕೃತ ಭಾಷೆಯು ಪ್ರಾದೇಶಿಕ ಭಾಷೆಗಳಿಗೆ ಪೋಷಕವಾದ, ಸಂಪದ್ಭರಿತ ಭಾಂಡಾರವೂ ಅಹುದು; ನವಜ್ಞಾನದ ಚಿನ್ನದ ಗಣಿಯೂ ಅಹುದು.

ಈ ದೃಷ್ಟಿಯಿಂದ ಶ್ರೀ ಚಕ್ರವರ್ತಿಗಳ ಶಬ್ದಕೋಶವು ಬಹಳ ಬೇಗವೇನೂ ಹೊರಬಂದಿಲ್ಲ. ಕನ್ನಡ, ಸಂಸ್ಕೃತ ವಿದ್ಯಾರ್ಥಿಗಳಿಗೆ ಇದು ಅತೀವ ಉಪಯುಕ್ತವಿದೆ. ಕನ್ನಡದಲ್ಲಿ ಸಂಸ್ಕೃತಸಾಹಿತ್ಯ ವಿಚಾರಗಳನ್ನು ಅನುವಾದಿಸ ಬಯಸುವ ಪಂಡಿತರಿಗೆ ಈ ಶಬ್ದಕೋಶವು ತುಂಬಾ ಸಹಾಯಕವಾಗುವದು. ಕನ್ನಡ ಪಂಡಿತರಿಗೂ ಕನ್ನಡ ಶಬ್ದಸಂಪತ್ತಿಯನ್ನು ವರ್ಧಿಸುವುದಕ್ಕೂ, ಕನ್ನಡದ ಅನೇಕ ಶಬ್ದಗಳಿಗೆ ನಿಶ್ಚಿತಾರ್ಥಗಳನ್ನು ಕಂಡುಹಿಡಿಯಲಿಕ್ಕೂ ಅನುಕೂಲವಾಗುವದು.

ಈ ಗ್ರಂಥವನ್ನು ಸಿದ್ಧಗೊಳಿಸುವಲ್ಲಿ ಲೇಖಕರು ಬಹು ದೀರ್ಘಕಾಲ ವಿಶೇಷ ಶ್ರಮವಹಿಸಿದ್ದರೆಂದು ನಾನು ಹೇಳಲೇ ಬೇಕು. ಇದರಲ್ಲಿ ಶಬ್ದಗಳ ವ್ಯುತ್ಪತ್ತ್ಯರ್ಥಗಳನ್ನೂ, ವ್ಯಾಕರಣಪ್ರಮಾಣಗಳನ್ನೂ ಕೊಟ್ಟಿದ್ದಾರೆ. ಸಾಹಿತ್ಯದ ಮತ್ತು ಇತರ ಸಂಸ್ಕೃತ ಗ್ರಂಥಗಳಿಂದ ಉಚಿತ ಪ್ರಯೋಗೋದಾಹರಣೆಗಳನ್ನು ಕೊಟ್ಟು ಅರ್ಥವನ್ನು ವಿಶದಗೊಳಿಸಿದ್ದಾರೆ. ಹೀಗೆ ಈ ಶಬ್ದಕೋಶವು ಕೇವಲ ಶಬ್ದಾರ್ಥಗಳಿಂದ ಕೂಡಿರದೆ ಸಂಸ್ಕೃತಭಾಷೆಯ ಮೂಲಭೂತ ವಿಚಾರಗಳ ಆಗರವಾಗಿದೆ.

ಇಂಥ ಶಬ್ದಕೋಶದ ಎಲ್ಲ ಸಂಪುಟಗಳೂ ಬೇಗ ಪ್ರಕಟವಾಗಿ ಕರ್ಣಾಟಕದ ಕನ್ನಡ, ಸಂಸ್ಕೃತ ವಿದ್ಯಾರ್ಥಿಗಳಿಗೆ ತನ್ನ ಅಮೂಲ್ಯ ಸಹಾಯ ನೀಡಲೆಂದು ಹಾರೈಸುವೆನು.

**ಆರ್. ಆರ್. ದಿವಾಕರ.**

श्रीः

# ಪ್ರಸ್ತಾವನೆ

नत्वा गुरूनन्तरायसमुदायनिवृत्तये।
उपासे श्रीहयग्रीवं ज्ञानानन्दमयं विभुम्॥

"कुर्वन्नेवेह कर्माणि जिजीविषेच्छतं समाः"
(ईशोपनिषत्)

"धर्मो रक्षति रक्षितः"
"स्वे स्वे कर्मण्यभिरतः संसिद्धिं लभते नरः"
(गीता १८-४५)

ಎಂಬ ಪರಮಾತ್ಮನ ಅಮೃತವಾಣಿಯಂತೆ ಮಾನವನು ತನಗೆ ವಿಹಿತವಾದ ಕರ್ಮಗಳನ್ನು ಬಿಡದೆ ಆಚರಿಸುತ್ತಿದ್ದಲ್ಲಿ ಸಕಲ ಸಿದ್ಧಿಗಳನ್ನೂ ಪಡೆಯಬಹುದು.

ಲೋಕದಲ್ಲಿ ಮಾನವನು ಸುಖಸಾಧನವನ್ನರಿತೂ, ಅದರ ಅನುಷ್ಠಾನದಲ್ಲಿ ಶಕ್ತನಾಗಿದ್ದರೂ ಅಜ್ಞಾನದಿಂದಲೋ, ಕರ್ಮವಾಸನೆಯಿಂದಲೋ, ಸಂಸರ್ಗದೋಷದಿಂದಲೋ ಸುಖಸಾಧನವಾದ ಪುಣ್ಯಕಾರ್ಯಗಳನ್ನು ಆಚರಿಸದೆಯೇ ಸುಖವನ್ನಪೇಕ್ಷಿಸುವುದೂ, ದುಃಖಹೇತುವಾದ ಪಾಪಕಾರ್ಯಗಳನ್ನು ಎಂದೆಂದಿಗೂ ಬಿಡದೆ ದುಃಖ ಬೇಡವೆನ್ನುವುದೂ ಸ್ವಭಾವ.

पुण्यस्य फलमिच्छन्ति पुण्यं नेच्छन्ति मानवाः।
न पापफलमिच्छन्ति पापं कुर्वन्ति यत्नतः॥

ತಿರ್ಯಕ್‌ಪ್ರಾಣಿಗಳಿಗಿಲ್ಲದ ವಿಶೇಷವಾದ ವಿವೇಚನಾ ಶಕ್ತಿಯನ್ನು ಪರಮಾತ್ಮನು ಮಾನವನಿಗೆ ಅನುಗ್ರಹಿಸಿರುವುದರಿಂದ ಇವನು ವಿವೇಕದಿಂದ ಬಾಳದಿದ್ದರೆ ಎಂದೆಂದಿಗೂ ದಾನವನಾಗಿಯೇ ಇರುವನು.

ಮನುಷ್ಯನು ತನಗೆ ವಿಹಿತವಾದ ಪವಿತ್ರವಾದ ಧರ್ಮಕಾರ್ಯಾಚರಣೆಯಿಂದ ತನ್ನ ಸಂಸ್ಕೃತಿಯನ್ನು ಉಜ್ಜ್ವಲಗೊಳಿಸಬೇಕು. ಸಂಸ್ಕೃತಿಯೆಂದರೆ ಸಮ್ಯಕ್‌ಕರಣವೆಂದರ್ಥ. ಮನುಷ್ಯನು ನಿತ್ಯಜೀವನದಲ್ಲಿ ತ್ರಿಕರಣಗಳಿಂದಲೂ ನಡೆಯಿಸುವ ಪರಿಶುದ್ಧವಾದ ವ್ಯವಹಾರವೇ ಸಂಸ್ಕೃತಿಯ ಗುರುತು. ಮೊದಲನೆಯದು ಕಾಯಪಾರಿಶುದ್ಧ್ಯ; ಎರಡನೆಯದು ವಾಕ್ ಪಾರಿಶುದ್ಧ್ಯ; ಮೂರನೆಯದು ಹೃದಯ ಪಾರಿಶುದ್ಧ್ಯ. ಇವೆಲ್ಲವೂ ಇದ್ದರೇನೇ ಸಂಸ್ಕೃತವಾದ ಜೀವನವಾಗುವುದು. ಧರ್ಮಾನುಷ್ಠಾನ, ವಿನಯ, ಸಾಹಿತ್ಯ, ಕಲೆ, ವೇಷ, ಭಾಷೆ, ಭೂಷಣ— ಇವೆಲ್ಲವೂ ಸಂಸ್ಕೃತಿಯ ಹೆಗ್ಗುರುತುಗಳು. ಇವೆಲ್ಲ ಪ್ರಾಂತಪ್ರಾಂತಕ್ಕೂ ವಿಭಿನ್ನವಾಗಿವೆ. ನಮ್ಮ ಭಾರತೀಯ ಸಂಸ್ಕೃತಿಯು ಅನ್ಯಾದೃಶವಾದುದು. ಈ ಸಂಸ್ಕೃತಿಯಲ್ಲಿ ಇಡೀ ವಿಶ್ವದ ಕಲ್ಯಾಣಭಾವನೆಯು ಎತ್ತಿಕಾಣುವುದು. ಭಾರತೀಯರ ಜೀವನದಲ್ಲಿ ಸಂಸ್ಕೃತಿಯು ಆಧ್ಯಾತ್ಮಿಕದೊಡನೆ ಹಾಸುಹೊಕ್ಕಾಗಿದೆ. ಎಲ್ಲಕ್ಕೂ ಪ್ರಧಾನವಾದ ಧರ್ಮಕ್ಕೆ ಚ್ಯುತಿಯುಂಟಾದರೆ ಸಂಸ್ಕೃತಿಯ ಅಧಃಪತನವಾದಂತೆಯೇ.

ಪಾಶ್ಚಾತ್ಯರೂ ಸಹ ವಿಶ್ವದ ಯಾವ ದೇಶದಲ್ಲೂ, ಯಾವ ಭಾಷೆಯಲ್ಲೂ ಕಾಣದ ಉತ್ತಮಸಂಸ್ಕೃತಿಗೆ ಮೂಲವಾದ ವೇದ, ವೇದಾಂಗಗಳು, ಕಾವ್ಯ, ನಾಟಕ, ನಾಟ್ಯಶಾಸ್ತ್ರ, ಶಿಲ್ಪಶಾಸ್ತ್ರ, ಅರ್ಥಶಾಸ್ತ್ರ, ರಾಜನೀತಿಶಾಸ್ತ್ರ ಮುಂತಾದ ಸಕಲಶಾಸ್ತ್ರಗಳನ್ನೂ ಯಾವ ಸಂಸ್ಕೃತದಲ್ಲಿ ಕಂಡು ಮುಗ್ಧರಾಗಿ ನಮ್ಮ ದೇಶದ ವಿಖ್ಯಾತ ಪಂಡಿತರಲ್ಲಿ ಸಂಸ್ಕೃತವನ್ನು ಕಲಿತು ಮೇಲೆ ಕಂಡ ಅಪಾರ ಜ್ಞಾನಭಾಂಡಾರವನ್ನು ತಮ್ಮದನ್ನಾಗಿ ಮಾಡಿಕೊಂಡರೋ, ಯಾವ

ಭಾಷಾ ಜ್ಞಾನದಿಂದ ಇಂದಿನ ವಿಜ್ಞಾನಯುಗವನ್ನು ನಿರ್ಮಿಸಲು ಮೇಲೆ ಕಂಡ ಅಮೂಲ್ಯ ನಿಧಿಯನ್ನು ಉಪಯೋಗಿಸಿಕೊಂಡರೋ ಅಂತಹ ಸಂಸ್ಕೃತ ಭಾಷೆಯಲ್ಲಿ ಅಕಿಂಚಿತ್ಕರತ್ವಜ್ಞಾನವುಂಟಾಗಿ ಇಂದು ನಮ್ಮ ಮಕ್ಕಳು ಅದನ್ನು ದ್ವೇಷಿಸುವ ಕಾಲವೊದಗಿರುವುದು ಯಾವ ಸಂಸ್ಕೃತಿಪ್ರಿಯನ ಮನಸ್ಸನ್ನು ತಾನೇ ನೋಯಿಸಲಾರದು?

ನಮ್ಮ ಭಾರತ ದೇಶದಲ್ಲಿ ಭಾಸ, ಕಾಳಿದಾಸ, ಭವಭೂತಿ ಮೊದಲಾದ ಮಹಾ ಕವಿಗಳು ನಮ್ಮ ಭಾರತೀಯರ ಭವ್ಯ ಜೀವನವನ್ನು ಅನೇಕ ವರ್ಷಗಳ ಅನುಭವದಿಂದ ತಮ್ಮ ಕಾವ್ಯನಾಟಕಗಳಲ್ಲಿ ವಿಶ್ವಕ್ಕೆಲ್ಲಾ ಹೃದಯಂಗಮವಾಗಿರುವಂತೆ ವರ್ಣಿಸಿರುತ್ತಾರೆ. ಎಲ್ಲ ಪುರಾಣಗಳಲ್ಲಿಯೂ, ಶಾಸ್ತ್ರಗಳಲ್ಲಿಯೂ ಸನಾತನಧರ್ಮವೇ ಪ್ರತಿಪಾದಿಸಲ್ಪಟ್ಟಿರುವುದು. ಯಾವ ಪ್ರಾಂತದ ಸಂಸ್ಕೃತಸಾಹಿತ್ಯವನ್ನು ನೋಡಿದರೂ ಸರ್ವಾಂಗಸುಂದರವೂ, ಪವಿತ್ರವೂ ಆದ ನಮ್ಮ ಸನಾತನಸಂಸ್ಕೃತಿಯು ಪ್ರಪಂಚದ ಎಲ್ಲರ ಮನಸ್ಸನ್ನೂ ಆಕರ್ಷಿಸುವಂತೆ ಪ್ರತಿಪಾದಿತವಾಗಿದೆ.

ನಮ್ಮ ದೇಶದಲ್ಲಿ ವಿದೇಶದ ಸಂಸ್ಕೃತಿಯ ಸಂಸರ್ಗದಿಂದ ಇಂದು ನಮ್ಮ ಸಂಸ್ಕೃತಿಯುಳಿದಿರುವುದು ನಾಟಕ ಮತ್ತು ಸಂಗೀತಗಳಲ್ಲಿ ಮಾತ್ರ. ನಮ್ಮ ಜೀವನವನ್ನು ಭವ್ಯವಾಗಿ ರೂಪಿಸತಕ್ಕ ಸಂಸ್ಕೃತಮಯವಾದ ಮಿಕ್ಕೆಲ್ಲ ಗ್ರಂಥಗಳಲ್ಲೂ ತಾತ್ಸಾರಭಾವನೆಯುಂಟಾಗಿರುವುದರಿಂದ ಸಕಲ ವಿಧದಲ್ಲೂ ಹಿಂದುಳಿದವರಾಗಿ ಪರಸ್ಪರ ದ್ವೇಷ, ಅಸೂಯೆ, ಅಸಹನೆ ಮುಂತಾದ ಅನರ್ಥಕಾರಕಪ್ರವೃತ್ತಿಗೆ ಬಲಿಯಾಗಿ ನರಳಬೇಕಾಗಿದೆ. ಇಂದು ನಾವು ಪಡೆದಿರುವ ಆರ್ಥಿಕ, ನೈತಿಕ ಮತ್ತು ಸಾಮಾಜಿಕ ಅವನತಿಗಳೆಲ್ಲವೂ ನಮ್ಮ ಸಂಸ್ಕೃತಿಯ ಅಧಃಪತನದಿಂದಲೇ.

ಆದುದರಿಂದ ಮಾನವನು ತನ್ನ ಜೀವನವನ್ನು ಭವ್ಯವಾಗಿ ರೂಪಿಸಿಕೊಳ್ಳಲು ಸಂಸ್ಕೃತ ಭಾಷಾಮಯವಾದ ಸಾಂಸ್ಕೃತಿಕ ಗ್ರಂಥಗಳನ್ನು ಅವಶ್ಯವಾಗಿ ಅಧ್ಯಯನಮಾಡಬೇಕೆಂದೂ, ಪ್ರತಿಯೊಬ್ಬ ಭಾರತೀಯನೂ ಸಂಸ್ಕೃತ ಭಾಷೆಯನ್ನು ಕಲಿಯಬೇಕಾದುದು ಅವಶ್ಯವೂ, ಸರ್ವಶ್ರೇಷ್ಠವೂ ಎಂದೂ ಯಾರಿಗೂ ಒತ್ತಿಹೇಳಬೇಕಾದ ಆವಶ್ಯಕತೆಯಿಲ್ಲ. ಎಲ್ಲಾ ವಿಧವಾದ ಪ್ರಗತಿಗೂ ಈ ಗ್ರಂಥಗಳು ಮೂಲಭೂತವಾಗಿರುವುದರಿಂದ ನಮ್ಮ ಭಾರತೀಯರು ಮಾತ್ರವಲ್ಲದೆ, ವಿದೇಶೀಯರೂ ಈ ಭಾಷಾ ಗ್ರಂಥಗಳಿಗೆ ಎಲ್ಲಕ್ಕಿಂತಲೂ ಮಿಗಿಲಾದ ಮಾನ್ಯತೆಯನ್ನೂ, ಪ್ರೋತ್ಸಾಹವನ್ನೂ ಕೊಡುತ್ತ ಈ ಭಾಷಾಜ್ಞಾನ ಸಂಪಾದಿಸಿ, ಅಮೂಲ್ಯ ವಿಷಯಗಳನ್ನು ಗ್ರಹಿಸಿ, ಸರ್ವತೋಮುಖವಾದ ಪ್ರಗತಿಯನ್ನು ಹೊಂದುತ್ತಿರುವುದು ನಮ್ಮೆಲ್ಲರಿಗೂ ತಿಳಿದ ವಿಷಯ.

## ಸಂಸ್ಕೃತ ವಿದ್ಯಾಭ್ಯಾಸದ ಆವಶ್ಯಕತೆ

ಇಂದು ನಮ್ಮ ದೇಶದಲ್ಲಿ ಕೂಲಂಕಷವಾದ ಪಾಂಡಿತ್ಯವನ್ನು ಸಂಪಾದಿಸಿರುವ ಸಂಸ್ಕೃತ ವಿದ್ವಾಂಸರ ಸಂಖ್ಯೆಯು ತೀರ ಕಡಿಮೆಯಾಗಿರುವುದರಿಂದ ನಮ್ಮ ವಿದ್ಯಾರ್ಥಿಗಳು ಸಂಸ್ಕೃತದಲ್ಲೂ ಉಚ್ಚ ವ್ಯಾಸಂಗಕ್ಕಾಗಿ ವಿದೇಶಗಳಿಗೆ ಹೋಗಿ ಬರುತ್ತಿರುವುದು ನಮ್ಮೆಲ್ಲರಿಗೂ ತಿಳಿದ ವಿಷಯ. ಸಾಂಪ್ರದಾಯಿಕವಾಗಿ ಬಂದ ಸಂಸ್ಕೃತದ ಅಧ್ಯಯನ ಪದ್ಧತಿಯು ನಮ್ಮಲ್ಲಿ ಅವಿಚ್ಛಿನ್ನವಾಗಿ ಬೆಳೆದುಬಂದಿದ್ದರೆ ನಮ್ಮ ವಿದ್ಯಾರ್ಥಿವೃಂದಕ್ಕೆ ಈ ಕ್ಲೇಶವು ತಪ್ಪುತ್ತಿರಲಿಲ್ಲವೆ? ಇದು ಹೀಗೆಯೇ ಮುಂದುವರಿದರೆ ಇನ್ನು ಕೆಲವೇ ವರ್ಷಗಳಲ್ಲಿ ಭಾರತ ದೇಶದಲ್ಲಿ ಸಂಸ್ಕೃತ ವಿದ್ಯೆಯೂ ಇತ್ತೆ? ಎಂಬ ಸಂಶಯ ಹುಟ್ಟುವ ಕಾಲವೂ, ವಿದೇಶೀಯರಿಂದಲೇ ಸಂಸ್ಕೃತದ ಅಕ್ಷರಾಭ್ಯಾಸ ಮಾಡುವ ಸನ್ನಿವೇಶವೂ ಒದಗಬಹುದೆಂಬುದನ್ನು ಯಾರೂ ಮರೆಯಬಾರದು. ಯಾವ ನಮ್ಮ ಭಾರತದ ಜನತೆಯು ತಮ್ಮ ವಿದ್ಯೆಯ ಮಹಿಮೆಯಿಂದಲೂ, ಸಂಸ್ಕೃತವಾದ ಜೀವನದಿಂದಲೂ ಇಡೀ ವಿಶ್ವಕ್ಕೇ ಆದರ್ಶರಾಗಿದ್ದರೋ ಅಂತಹ ಈ ಜನತೆಯು ಸಕಲ ಪ್ರಗತಿಗೂ ಕಾರಣವಾದ ಸಂಸ್ಕೃತ ವಿದ್ಯೆಯನ್ನು ಕಲಿತು ಸಕಲ ಶ್ರೇಯಸ್ಸನ್ನೂ ಪಡೆಯಲು ಪ್ರಯತ್ನಿಸುವುದು ಸಾಧುವಲ್ಲವೆ?

ಮಹಾತ್ಮಗಾಂಧಿಯವರೂ ಸಹ ತಮಗೆ ಸಂಸ್ಕೃತ ವಿದ್ಯಾಭ್ಯಾಸದಲ್ಲಿ ಉನ್ನತಮಟ್ಟದ ವ್ಯಾಸಂಗದ ಕೊರತೆಯನ್ನೂ, ಎಲ್ಲರೂ ಸಂಸ್ಕೃತವನ್ನು ಕಲಿಯಬೇಕಾದ ಆವಶ್ಯಕತೆಯನ್ನೂ ಈ ಕೆಳಗಿನ ವಾಕ್ಯಗಳಿಂದ ಒತ್ತಿ ಹೇಳಿರುತ್ತಾರೆ:

"If I had not acquired the little Samskrit that I learnt then, I should have found it difficult to take any interest in our sacred books. In fact I deeply regret that I was not able to acquire a more thorough knowledge of the language, because I have since realized that every Hindu boy and girl should possess sound Samskrit learning."

ಸಂಸ್ಕೃತ ಭಾಷೆಯ ಮಹತ್ತ್ವದ ವಿಷಯದಲ್ಲಿ ನಮ್ಮ ದೇಶದ ಹಿರಿಯ ನಾಯಕರೂ, ಸುಪ್ರಸಿದ್ಧ ಪಾಶ್ಚಾತ್ಯ ವಿದ್ವಾಂಸರೂ ಕೊಟ್ಟಿರುವ ಅಭಿಪ್ರಾಯಗಳು:

" Samskrit Literature is still able to keep its head high and to rank as first among the Literatures of the world."

DR. RAJENDRA PRASAD.
*President of India.*

"Samskrit is a language amazingly rich, efflorescent, full of luxuriant growth of all kinds. and yet precise and strictly keeping within the framework of Grammar which Panini laid down two thousand six hundred years ago. It spread out, added to its richness, became fuller and more ornate, but always it stuck to its original roots."

PANDIT JAWAHARLAL NEHRU,
*Prime Minister of India.*

"Samskrit language, whatever be its antiquity, is of a wonderful structure; more perfect than the Greek, more copious than the Latin and more exquisitely refined than either."

—SIR WILLIAM JONES.

"Samskrit is the language of languages."

—MAX MULLER.

## ಸಂಸ್ಕೃತ ಭಾಷಾ ಜ್ಞಾನೋಪಾಯ

ಹೀಗೆ, ನಮ್ಮ ಜೀವಿತಕಾಲದಲ್ಲಿ ಸಂಸ್ಕೃತ ವಿದ್ಯಾಭ್ಯಾಸವು ಅವಶ್ಯವೆಂದು ಹಿರಿಯ ವಿದ್ವಾಂಸರ ಮತ್ತು ನಾಯಕರ ಅಭಿಪ್ರಾಯ. ಪ್ರಾಯಃ ಎಲ್ಲಾ ಭಾಷೆಗಳನ್ನೂ ಅಭ್ಯಸಿಸಲು ಆಯಾ ಭಾಷೆಯ ವ್ಯಾಕರಣ ಜ್ಞಾನವು ಮುಖ್ಯ. ವ್ಯಾಕರಣದಿಂದ ಪ್ರಾಯಃ ಯೌಗಿಕ ಶಬ್ದಗಳ ಅರ್ಥಜ್ಞಾನವೂ, ಕೋಶ (ನಿಘಂಟು) ಗಳಿಂದ ಸಾಮಾನ್ಯ ಯೌಗಿಕ ಮತ್ತು ರೂಢಶಬ್ದಗಳ ಅರ್ಥಜ್ಞಾನವೂ ಉಂಟಾದರೂ ಬಳಕೆಯಲ್ಲಿರುವ ಎಲ್ಲಾ (ರೂಢ ಮತ್ತು ಯೌಗಿಕ) ಸಂಸ್ಕೃತ ಶಬ್ದಗಳ ಅರ್ಥಜ್ಞಾನಕ್ಕಾಗಿ ವ್ಯಾಕರಣರೀತ್ಯಾ ವ್ಯುತ್ಪತ್ತಿಯನ್ನು ಬೋಧಿಸಿ ಅರ್ಥವನ್ನು ವಿವರಿಸುವ ಒಂದು ಶಬ್ದಕೋಶವು ಅವಶ್ಯವಾಗಿ ಬೇಕಾಗುವುದು. ಈಗಿನ ಕಾಲದಲ್ಲಿ ಅಂತಹ ಒಂದು ಶಬ್ದಕೋಶದಿಂದ ಭಾಷಾಜ್ಞಾನವನ್ನು ಸಂಪಾದಿಸುವುದು ಸುಲಭ.

## ಈಗ ಶಬ್ದಕೋಶದ ಆವಶ್ಯಕತೆ

ಪ್ರಾಚೀನ ಕಾಲದಲ್ಲಿ ಮೊದಲು ನಿಘಂಟುಗಳನ್ನು ವಾಚೋವಿಧೇಯವಾಗಿ ಕಂಠಪಾಠಮಾಡುವ ಪದ್ಧತಿಯಿದ್ದುದರಿಂದ ಮುಂದಿನ ವ್ಯಾಸಂಗವು ಸುಗಮವಾಗಿ ನಡೆಯುತ್ತಿದ್ದಿತು. ಆದರೆ ಆಧುನಿಕ ವಿದ್ಯಾಭ್ಯಾಸಪದ್ಧತಿಯು ತೀರ ಭಿನ್ನವಾದುದರಿಂದ ಕಂಠಪಾಠದ ಪದ್ಧತಿಯು ಸರಿಹೊಂದುವುದಿಲ್ಲವಾಗಿದೆ. ಈ ಕಾರಣದಿಂದ ನಮ್ಮ ಭಾರತದಲ್ಲಿ ಆಯಾ ಪ್ರಾಂತದವರು ತಮ್ಮ ತಮ್ಮ ಭಾಷೆಗಳಲ್ಲಿ ಸಂಸ್ಕೃತ ಶಬ್ದಾರ್ಥಕೋಶಗಳನ್ನು ರಚಿಸಿ ಸಂಸ್ಕೃತ ವ್ಯಾಸಂಗಕ್ಕೆ ವಿಶೇಷ ಸೌಕರ್ಯ ಕಲ್ಪಿಸಿ ಉತ್ತೇಜನ ಕೊಡುತ್ತಿದ್ದಾರೆ. ಸಂಸ್ಕೃತ ವ್ಯಾಸಂಗಕ್ಕಾಗಿ ಕೇವಲ ಸಂಸ್ಕೃತ-ಇಂಗ್ಲಿಷ್ ಶಬ್ದಕೋಶವನ್ನೇ ಅವಲಂಬಿಸಿರುವ ನಮ್ಮ ಕರ್ಣಾಟಕ ದೇಶದಲ್ಲಿಯೂ ಸಂಸ್ಕೃತ-ಕನ್ನಡ ಶಬ್ದಕೋಶದ ಆವಶ್ಯಕತೆಯು ಬಹಳ ಕಾಲದಿಂದಲೂ ಇರುವುದು.

## ಸಂಸ್ಕೃತ-ಕನ್ನಡ ಶಬ್ದಕೋಶದ ರಚನೆ

ನಮ್ಮ ದೇಶದಲ್ಲಿ ಖಿಲವಾಗುತ್ತಿರುವ ಸಂಸ್ಕೃತ ವಿದ್ಯೆಯು ನಮ್ಮ ದೇಶದ ಜನತೆಗೆ ರುಚಿಸುವಂತೆ ಶಾಶ್ವತವಾದ ಕಾರ್ಯವೊಂದನ್ನು ಕೈಗೊಳ್ಳಬೇಕೆಂದು ಪರಮಾತ್ಮನ ಪ್ರೇರಣೆಯಾಯಿತು. 1928ನೆಯ ಇಸವಿಯಲ್ಲಿ ಮದರಾಸಿನ ವಿಶ್ವವಿದ್ಯಾನಿಲಯದ ಪುಸ್ತಕಭಾಂಡಾರಕ್ಕೆ ನಾನು ಹೋಗಿದ್ದಾಗ ಅನೇಕ ಭಾರತೀಯ ಭಾಷೆಗಳಲ್ಲಿ ಸಂಸ್ಕೃತ ಶಬ್ದಕೋಶಗಳಿದ್ದುದನ್ನು ಕಂಡು ನಮ್ಮ ಕರ್ಣಾಟಕ ಭಾಷೆಯಲ್ಲೂ ಸಂಸ್ಕೃತ ಶಬ್ದಕೋಶದ ಆವಶ್ಯಕತೆಯು ಕಂಡುಬಂದುದೇ ಈ "**ಸಂಸ್ಕೃತ-ಕನ್ನಡ ಶಬ್ದಕೋಶ**" ದ ರಚನೆಗೆ ಕಾರಣ.

ಈ ಕಾರಣದಿಂದ "**ಶಬ್ದಾರ್ಥಕೌಸ್ತುಭ**"ವೆಂಬ ಈ "**ಸಂಸ್ಕೃತ–ಕನ್ನಡ ಶಬ್ದಕೋಶ**"ದ ರಚನೆಯು ಪರಮಾತ್ಮನ ಪ್ರೇರಣೆಯಿಂದ 1932ರಲ್ಲಿ ಪ್ರಾರಂಭವಾಯಿತು. ಕೇವಲ ಪದ–ಪದಾರ್ಥಗಳ ರೂಪದಲ್ಲಿ ಪ್ರಾರಂಭವಾದ ಇದರ ಕಾರ್ಯವು ಕೆಲವು ಕಾಲದ ಮೇಲೆ ಲಿಂಗನಿರ್ದೇಶ, ಪದಗಳ ವ್ಯುತ್ಪತ್ತಿಪ್ರದರ್ಶನಗಳಿಂದ ಸ್ವಲ್ಪ ವಿಸ್ತರಗೊಂಡು ಅದರಿಂದಲೂ ತೃಪ್ತಿಯಾಗದೆ ಕಾವ್ಯಗಳ ಪ್ರಯೋಗಪ್ರದರ್ಶನ, ಕೋಶಗಳ ಪ್ರಮಾಣ, ಮುಖ್ಯ ಪದಗಳಿಗೆ ವಿಶೇಷ ವಿವರಣೆ ಇವುಗಳನ್ನೊಳಗೊಂಡಿತು. ಆಗ ನಮ್ಮ ಬೆಂಗಳೂರು ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ **ಶ್ರೀ ಜಿ. ಕೆ. ತಿಮ್ಮಣ್ಣಾಚಾರ್ಯ,** ಎಮ್.ಎ., ಬಿ.ಟಿ. ಇವರ ಮತ್ತು ಶ್ರೀ ಚಾಮರಾಜೇಂದ್ರ ವೇದ ಮಹಾಪಾಠಶಾಲೆಯ ಪ್ರಿನ್ಸಿಪಾಲರಾಗಿದ್ದ ವೈದಿಕಧರ್ಮಾಚಾರ್ಯ **ಶ್ರೀ ಎನ್. ಮಲ್ಲಿಕಾರ್ಜುನ ಶಾಸ್ತ್ರಿಗಳು,** ಎಮ್.ಎ. ಈ ಮಹನೀಯರ ಅಮೂಲ್ಯ ಸಲಹೆಯಿಂದಲೂ, ನಮ್ಮ ಮಿತ್ರರಾದ ಕೆಲವು ಪಂಡಿತರ ಸಲಹೆಯಿಂದಲೂ ಕ್ರಮೇಣ ಇನ್ನೂ ವಿಸ್ತರಗೊಂಡು ಈಗ ಈ ರೂಪಕ್ಕೆ ಬಂದಿರುವುದು. ಶ್ರೀಮಾನ್ ಜಿ. ಕೆ. ತಿಮ್ಮಣ್ಣಾಚಾರ್ಯರು ನನ್ನ ಪಾಠಪ್ರವಚನದ ಜೊತೆಗೆ ಕಾಲೇಜಿನ ಪುಸ್ತಕಭಾಂಡಾರದ ಕಾರ್ಯವನ್ನೂ ನನಗೆ ವಹಿಸಿಕೊಟ್ಟು ಈ ಕಾರ್ಯಕ್ಕೆ ಪರಮೋಪಕಾರ ಮಾಡಿದರು. ಕಾಲೇಜಿನಲ್ಲಿ ಪಾಠಪ್ರವಚನಾದಿಗಳಿಗೆ ಕ್ಲುಪ್ತವಾದ ಕಾಲವನ್ನು ವಿನಿಯೋಗಿಸಿ ಉಳಿದ ಕಾಲದಲ್ಲಿ ಈ ಶಬ್ದಕೋಶದ ರಚನೆಯ ಕಾರ್ಯವು ನಡೆಯುತ್ತಿದ್ದುದರಿಂದ ಇದರ ರಚನೆಗೆ ಇಷ್ಟು ದೀರ್ಘಕಾಲ ಹಿಡಿಯಿತು.

### ಸಂಸ್ಕೃತ ಭಾಷೆಯ ಪರಿಮಿತಿ

ಸಂಸ್ಕೃತ ಭಾಷೆಯು ವೇದದಿಂದಲೇ ಮುಂದೆ ಬೆಳೆದುಬಂದಿರುವುದರಿಂದ ಇದು ಅನಾದಿ ಮತ್ತು ನಿತ್ಯ.

**अनादिनिधना नित्या वागुत्सृष्टा स्वयम्भुवा ।**
**ऋषीणां नामधेयानि याश्च वेदेषु सृष्टयः ।।**

(भा० शान्ति० २३९-९३)

ವೇದಗಳ ಕಾಲದಿಂದಲೂ ಬೆಳೆದು ಬಂದು ನಮ್ಮ ಸಕಲ ಸಾಂಸ್ಕೃತಿಕ ಗ್ರಂಥಗಳಿಗೂ ಮೂಲವಾಗಿರುವ ಮತ್ತು ಸರ್ವೋಪಕಾರಕವಾಗಿರುವ ಸಂಸ್ಕೃತ ವಾಙ್ಮಯವು ಅಪರಿಚ್ಛಿನ್ನವಾದುದು. ವ್ಯಾಕರಣ ಮಹಾ ಭಾಷ್ಯದಲ್ಲಿ ಪಸ್ಪಶಾಹ್ನಿಕದಲ್ಲಿ ಪತಂಜಲಿಮಹರ್ಷಿಗಳು, "बृहस्पतिरिन्द्राय दिव्यं वर्षसहस्रं शब्दपारायणं प्रोवाच, नान्तं जगाम" ಎಂದು ಹೇಳಿರುವುದರಿಂದ ಇದರ ಶಬ್ದರಾಶಿಯ ಇಯತ್ತೆ (ಪರಿಮಿತಿ) ಯನ್ನು ಯಾರಿಂದಲೂ ಹೇಳಲು ಸಾಧ್ಯವಿಲ್ಲ.

ಇಂತಹ ಅಸಂಖ್ಯಾತವಾದ ಶಬ್ದರಾಶಿಯನ್ನೊಳಗೊಂಡಿರುವ ಸಂಸ್ಕೃತ ವಾಙ್ಮಯದ ಪದಗಳನ್ನು ಎಷ್ಟೆಷ್ಟು ಸಂಗ್ರಹಿಸಿ ಬರೆದರೂ ಅದು ಎಂದೆಂದಿಗೂ ಅಪೂರ್ಣವೇ ಸರಿ.

ಈ ಶಬ್ದಕೋಶದಲ್ಲಿ ಮುಖ್ಯವಾಗಿ ಸಂಸ್ಕೃತ ವ್ಯಾಸಂಗಿಗಳಿಗೆ ಬೇಕಾದ ಲೌಕಿಕ ಸಂಸ್ಕೃತ ಪದಗಳನ್ನು ಮಾತ್ರ ಸೇರಿಸಲಾಗಿದೆ. ಗ್ರಂಥವಿಸ್ತರಭಯದಿಂದ ವೈದಿಕಶಬ್ದಗಳನ್ನು ಇದರಲ್ಲಿ ಸೇರಿಸಲಾಗಲಿಲ್ಲ. ಮುಖ್ಯವಾಗಿ ಕಾವ್ಯ ನಾಟಕಾದಿಗಳ ವ್ಯಾಸಂಗಕ್ಕೆ ಅವಶ್ಯವಾದ ಮತ್ತು ಪ್ರಯೋಗದಲ್ಲಿರುವ ಪದಗಳನ್ನು ಅವುಗಳ ಪ್ರಯೋಗಪ್ರದರ್ಶನ ಪೂರ್ವಕ ಸೇರಿಸಿ ಮಾಧ್ಯಮಿಕಶಾಲೆಯಿಂದ ಹಿಡಿದು ಕಾಲೇಜಿನವರೆಗೂ ಎಲ್ಲಾ ದರ್ಜೆಯ ವಿದ್ಯಾರ್ಥಿಗಳೂ ಉಪಯೋಗಿಸಲನುಕೂಲಿಸುವಂತೆ ಇದರ ರಚನೆ ನಡೆದಿದೆ.

ನಮ್ಮ ಕರ್ಣಾಟಕದಲ್ಲಿ ಕನ್ನಡ ಭಾಷೆಯು ಬೆಳೆದುಬಂದು ಮುಂದೆ ಅದೊಂದು ಸ್ವತಂತ್ರಭಾಷೆಯಾಗಿ ಆಧುನಿಕ ಕನ್ನಡ ಸಾಹಿತ್ಯವು ರೂಪಗೊಳ್ಳಬೇಕಾದರೆ ಸಂಸ್ಕೃತ ಭಾಷಾ ಪರಿಕರ್ಮಿತವಾದ ಪ್ರಾಚೀನ ಕನ್ನಡ ಸಾಹಿತ್ಯದ ಅಧ್ಯಯನವೂ, ಅದರ ಅಧ್ಯಯನಕ್ಕೆ ನಿಷ್ಕೃಷ್ಟವಾದ ಸಂಸ್ಕೃತಭಾಷಾಜ್ಞಾನವೂ ಅವಶ್ಯವಾಗಿರುವುದರಿಂದ ನಮ್ಮ ದೇಶದ ಎಲ್ಲಾ ಸಂಸ್ಕೃತ ಮತ್ತು ಕನ್ನಡ ಭಾಷಾ ಜಿಜ್ಞಾಸುಗಳ ಸಲುವಾಗಿಯೂ ಈ ಶಬ್ದಕೋಶದ ರಚನೆಯು ನಡೆದಿದೆ.

ಶಬ್ದಗಳನ್ನು ಮೊದಲು ರೂಢ, ಯೌಗಿಕ ಮತ್ತು ಯೋಗರೂಢಗಳೆಂದು ಮೂರು ವಿಧವಾಗಿ ವಿಂಗಡಿಸಬಹುದು. डित्थः, डवित्थः ಮೊದಲಾದ ಅವಯವ ಶಕ್ತಿಯಿಲ್ಲದ ಕೇವಲ ಸಮುದಾಯ ಶಕ್ತಿಯುಳ್ಳ ಪದಗಳು ರೂಢ. ಪ್ರಕೃತಿ ಪ್ರತ್ಯಯ (अर्च + ण्वुल् (अक), दशरथ + इञ्, राजन् + पुरुषः) ಮೊದಲಾದ ಅವಯವಗಳ

ಶಕ್ತಿಯಿಂದ ಅರ್ಥವನ್ನು ಬೋಧಿಸುವ अर्चकः, दाशरथिः, राजपुरुषः ಮೊದಲಾದ ಪದಗಳು ಯೌಗಿಕಗಳು. पङ्कजम् ಮೊದಲಾದ, ಧಾತುಪದಪ್ರತ್ಯಯ ಮೊದಲಾದ ಅವಯವ ಶಕ್ತಿಯಿಂದ ಬೋಧ್ಯವಾದ ಪಂಕಜನಿಕರ್ತೃರೂಪವಾದ ಅವಯವಾರ್ಥದೊಡನೆ ವಿಶಿಷ್ಟವಾದ ಪದ್ಮರೂಪವಾದ ಅರ್ಥವನ್ನು ಕೊಡುವ ಪದಗಳು ಯೋಗರೂಢ.

ಶಬ್ದಗಳು ಕೃದಂತ, ತದ್ಧಿತಾಂತ ಮತ್ತು ಸಮಸ್ತಗಳೆಂದು ಮತ್ತೆ ಮೂರು ವಿಧವಾಗುವುವು.*

**ಕೃದನ್ತ:**—ಪ್ರತಿಯೊಂದು ಪದವೂ ಧಾತುವಿನಿಂದ ನಿಷ್ಪನ್ನವಾದುದರಿಂದ† ಒಂದೊಂದು ಧಾತುವಿಗೂ तव्यः — अध्येतव्यम् (ಪುಟ 64), अनीयर् — अभिनन्दनीयः (ಪು. 150), अवेक्षणीयः (ಪು. 242), यत् — अभिनेयः (ಪು. 152), ण्यत् — अवहार्यः (ಪು. 232), भावे क्तः — अनुपठितम् (ಪು. 87), ईक्षितम् (ಪು. 392), कर्त० क्तः — अवतीर्णः (ಪು. 215), कर्म० क्तः — अर्थितः (ಪು. 196), क्तवतुः — आमोदितवत् (ಪು. 328), शतृ — आशासत (ಪು. 354), कर्त० शानच् — अवेक्षमाणः (ಪು. 242), कर्म० शानच् — आलिख्यमानः (ಪು. 344), भावे घञ् — अभिषेकः (ಪು. 159), आचामः (ಪು. 291), कर० घञ् — आच्छादः (ಪು. 293), कर्म० घञ् — अर्थः (ಪು. 193), अधि० घञ् — आदर्शः (ಪು. 307), भावे ल्युट् — अटनम् (ಪು. 33), अर्हणम् (ಪು. 202), कर० ल्युट् — अपिधानम् (ಪು. 133), कर्म० ल्युट् — अशनम् (ಪು. 246), अधि० ल्युट् — आयतनम् (ಪು. 329), ण्वुल् — आघट्टकः (ಪು. 289), तृच् — अभिनेतृ (ಪು. 152), ಇತ್ಯಾದಿ ಕೃತ್ ಪ್ರತ್ಯಯಗಳು ಸೇರುವುವಲ್ಲದೆ ಣ್ಯಂತ, ಸನ್ನಂತ, ಯಙನ್ತ, ಯಙ್‌ಲುಗನ್ತ ಇವುಗಳೊಡನೆಯೂ ಯಥಾಸಂಭವ ಸೇರಿ ಆಗುವ ರೂಪಗಳೂ, ಇವೆಲ್ಲಕ್ಕೂ ಉಪಸರ್ಗಗಳ ಯೋಗದಿಂದ ಆಗುವ ರೂಪಗಳೂ, ಉಣಾದಿ ಪ್ರತ್ಯಯಗಳು ಸೇರಿ ಆಗುವ ರೂಪಗಳೂ ಅಸಂಖ್ಯಾತವಾಗುವುವು.

**ತದ್ಧಿತಾಂತ:**—इनिः — अंशुमालिन् (ಪು. 2), खः — अर्वाचीनः (ಪು. 201), ठक् — आथर्वणिकः (ಪು. 307), आध्यासिकः (ಪು. 314), ठञ् — आग्रहायणिकः (ಪು. 389), आग्रहारिकः (ಪು. 289), ठन् — आपणिकः (ಪು. 318), छः — अन्तरीयम् (ಪು. 106), इष्ठन् — अशिष्ठः (ಪು. 247), धा — अष्टधा (ಪು. 254) ಇತ್ಯಾದಿ ಅಗಣಿತ ತದ್ಧಿತ ಪ್ರತ್ಯಯಗಳು ಕೇವಲ ಪ್ರಾತಿಪದಿಕ, ಕೃದಂತ, ಸಮಾಸಗಳ ಮೇಲೂ ನಾನಾ ವಿಧ ಅರ್ಥಗಳಲ್ಲಿ ಸೇರಿ ಅಸಂಖ್ಯಾತ ರೂಪಗಳು ನಿಷ್ಪನ್ನವಾಗುವುವು.

**ಸಮಸ್ತ:**—**अव्ययी०** — अधिहरि (ಪು. 60), अभिसायम् (ಪು. 161), आमित्रम् (ಪು. 326), आप्रपदम् (ಪು. 332), **तत्पुरुषः** — अङ्गराजः (ಪು. 24), अद्रिराजः (ಪು. 51), आर्यपुत्रः (ಪು. 340), **बहुव्रीहिः** — अनूरुः (ಪು. 101), अनूरुसारथिः (ಪು. 101), आप्तकामः (ಪು. 321), इभाननः (ಪು. 385), **द्वन्द्वः** — अग्नीवरुणौ (ಪು. 17), अग्नीषोमौ (ಪು. 17), अग्नेन्द्रौ (ಪು. 17) ಇತ್ಯಾದಿ ರೂಪಗಳು ಅಗಣಿತವಾಗುವುವು.

ಈ ರೀತಿ ಅಗಾಧವಾದ ಶಬ್ದರಾಶಿಗೆ ಅರ್ಥವನ್ನು ವಿವರಿಸುವ ಸಾಹಸಕ್ಕೆ ನಾನು ಕೈಹಾಕಿದುದು "मन्दः कवियशःप्रार्थी" ಎಂದು ಕಾಳಿದಾಸ ಮಹಾಕವಿಯು ಹೇಳಿದ ಮಾತಿನಂತಾಗಿದೆ. ಆದರೆ ಮಿತಪ್ರಜ್ಞನಾದ ನನ್ನ ಬುದ್ಧಿಶಕ್ತಿಗೂ, ನನ್ನ ಆರ್ಥಿಕಶಕ್ತಿಗೂ ಮೀರಿರುವ ಈ ಮಹಾಕಾರ್ಯವನ್ನು ಪರಮಾತ್ಮನು ನನಗೆ ವಹಿಸಿ ನೆಪಮಾತ್ರಕ್ಕೆ ನನ್ನ ಕೈಯಲ್ಲಿ ಲೇಖನಿಯನ್ನು ಹಿಡಿಯಿಸಿ ತಾನೇ ಬರೆಯಿಸಿರುವುದರಿಂದ ಆ ಪರಮಾತ್ಮನೇ ಇದರ ಮುದ್ರಣ ಮತ್ತು ಪ್ರಚಾರಕಾರ್ಯಗಳಿಗೂ ಸಾಹಾಯ್ಯ ಸೌಕರ್ಯಗಳನ್ನು ಕಲ್ಪಿಸುವನೆಂಬ ದೃಢನಂಬಿಕೆ ಮತ್ತು ಧೈರ್ಯಗಳಿಂದ ಈ ಕಾರ್ಯದಲ್ಲಿ ಮುಂದುವರಿದಿರುತ್ತೇನೆ.

ಪರಮಾತ್ಮನ ಕೃಪೆಯಿಂದ ಯಥಾಮತಿ ಸಂಕಲಿತವಾದ ಈ ಶಬ್ದಕೋಶವು 40,000 ಕ್ಕೂ ಹೆಚ್ಚು ಪದಗಳನ್ನು ಒಳಗೊಂಡು 1200 ಪುಟಗಳಲ್ಲಿ ಮುದ್ರಿತವಾಗಬಹುದೆಂದು ಮೊದಲು ಅಂದಾಜುಮಾಡಲಾಗಿದಿತು. ಆದರೆ

---

* ಯಾಸ್ಕರು ಶಬ್ದಪ್ರಪಂಚವನ್ನು ನಾಮಪದ, ಆಖ್ಯಾತ (ಕ್ರಿಯಾಪದ), ಉಪಸರ್ಗಗಳು ಮತ್ತು ನಿಪಾತಗಳೆಂದು ನಾಲ್ಕು ಬಗೆಯಾಗಿ ವಿಂಗಡಿಸಿದ್ದಾರೆ:

"तद्यान्येतानि चत्वारि पदजातानि नामाख्याते चोपसर्गनिपाताश्च तानीमानि भवन्ति" (नि० १-१-८)। ಆದರೆ ಶಾಕಟಾಯನರ ಮತದಂತೆ ಉಪಸರ್ಗಗಳು ನೇರವಾಗಿ ಅರ್ಥಕೊಡುವ ಶಕ್ತಿ ಹೊಂದಿರದೆ ನಾಮಾಖ್ಯಾತಗಳ ಸಂಬಂಧದಿಂದ ವಿಶೇಷವಾದ ಅರ್ಥವನ್ನು ಕೊಡುತ್ತವೆ.

† "नाम च धातुजमाह निरुक्ते व्याकरणे शकटस्य च तोकम्" (पातञ्जलमहाभाष्यम्)।

ಹಸ್ತಪ್ರತಿಯ ಪುನರ್ವಿಮರ್ಶೆಯ ಕಾಲದಲ್ಲಿ ಗ್ರಂಥವು ಬರಬರುತ್ತಾ ವಿಸ್ತರಗೊಂಡು 2000 ಪುಟಗಳಿಗೆ ಹೆಚ್ಚು ವಂತಾಗಿ ಈಗಿನ ಅಂದಾಜಿನಲ್ಲಿ ಸುಮಾರು 2500 ಪುಟಗಳಿಗೆ ಏರಬಹುದೆಂದು ತಿಳಿಯುತ್ತೇನೆ.

ಸಾಮಾನ್ಯವಾಗಿ ಇಂತಹ ದೊಡ್ಡ ಗ್ರಂಥಗಳಲ್ಲಿ ಮನುಷ್ಯಮಾತ್ರಕ್ಕೆ ಸಹಜವಾದ ಭ್ರಮಪ್ರಮಾದಗಳಿಂದ ಮುದ್ರಣ ಮತ್ತು ವಿಷಯಗಳ ಸ್ಖಾಲಿತ್ಯವು ಸಂಭವಿಸುವುದು ಅನಿವಾರ್ಯ. ಈ ಗ್ರಂಥದಲ್ಲಿ ಸಾಧ್ಯವಾದಷ್ಟೂ ಅಂತಹ ಸ್ಖಾಲಿತ್ಯಕ್ಕೆ ಅವಕಾಶ ಕೊಡಕೂಡದೆಂಬ ಉದ್ದೇಶವಿದ್ದರೂ ಕಳೆದ ಐದಾರು ವರ್ಷಗಳಲ್ಲಿ ನಾನು ಆರ್ಥಿಕವಾಗಿ ಅವರ್ಣನೀಯವಾದ ತೊಂದರೆಗಳನ್ನು ಅನುಭವಿಸಿ ಮನಸ್ಸಿಗೆ ಕಿಂಚಿತ್ತೂ ನೆಮ್ಮದಿಯಿಲ್ಲದೆ ನನಗೂ ಗೋಚರವಾಗದ ಕೆಲವು ತಪ್ಪುಗಳು ಬಿದ್ದಿವೆ. ಅಕರ್ಮಕ ಪದದಲ್ಲಿ ಶ್ರ ಧಾತುವಿಗೆ ಬದಲಾಗಿ ಶೃಣ್ ಎಂದೂ, ಅಲಙ್ಕಾರ ಪದದಲ್ಲಿ (೩-೩-೧೨೧) ಕ್ಕೆ ಬದಲಾಗಿ (೩-೩-೧೯) ಎಂದೂ ಅಚ್ಚಾಗಿದೆ. ಇಂತಹ ತಪ್ಪುಗಳನ್ನು ಶೋಧಿಸಿ ಮುಂದಿನ ಭಾಗದಲ್ಲಿ ಪಟ್ಟಿಯನ್ನು ಕೊಡಲಾಗುವುದು. ಈ ವಿಷಯದಲ್ಲಿ ಗುಣಗ್ರಾಹಿಗಳಾದ ಸಹೃದಯರು ಸಹೃದಯತೆಯಿಂದ ಕೊಡುವ ಸಲಹೆಗಳಿಗೆ ಸ್ವಾಗತವುಂಟು. ಈ ಸಂಬಂಧವಾಗಿ Sir Monier Monier Williams ರವರು ತಮ್ಮ "Samskrita-English Dictionary" ಯ ಪ್ರಸ್ತಾವನೆಯಲ್ಲಿ ಹೇಳಿರುವ ಎರಡು ಮಾತುಗಳನ್ನು ಇಲ್ಲಿ ಕೊಟ್ಟಿರುತ್ತೇನೆ:

"It is said of the Author of a well-known Dictionary that the number of mistakes which his critics discovered in it, were to him a source of satisfaction rather than annoyance. The large a work, he affirmed, the more likely it was to include errors, and a hypercritical condemnation of these was often symptomatic of a narrow-mindedness which could not take in the merit of any great performance as a whole."

ಇಂತಹ ಗ್ರಂಥಗಳ ರಚನೆಗೆ ಅನೇಕ ವಿಧ ಸೌಕರ್ಯಗಳು ಬೇಕು ಮತ್ತು ಜೀವಿಕೆಯು ಸುಭದ್ರವಾಗಿರಬೇಕು. ಈ ಶಬ್ದಕೋಶದ ರಚನೆಯ ಕಾಲದಲ್ಲಿ ನನಗೆ ಕೇವಲ ಅಲ್ಪ ಸಂಬಳ ಬರುತ್ತಿದ್ದರೂ ಕಷ್ಟಜೀವನದಲ್ಲಿಯೂ ಹೇಗೋ ಉತ್ಸಾಹದಿಂದ ರಚನೆಯ ಕಾರ್ಯವನ್ನು ಒಂದು ರೂಪಕ್ಕೆ ತಂದುದಾಯಿತು. ಅಲ್ಪಸ್ವಲ್ಪ ಆರ್ಥಿಕ ಸಾಹಾಯ್ಯ ಪಡೆದು ಮುದ್ರಣಕಾರ್ಯವನ್ನು ಪ್ರಾರಂಭಿಸಿದಾಗ ನನ್ನ ಜೀವಿಕೆಯ ಸಮಸ್ಯೆಯೊಂದು ಉದ್ಭವಿಸಿ ಬಹಳ ಕ್ಲೇಶದಲ್ಲೇ ಮುದ್ರಣಕಾರ್ಯವನ್ನು ಮುಂದುವರಿಸಬೇಕಾಯಿತು. ಈ ಒಂದು ಕಾರಣದಿಂದ ಮೊದಲನೆಯ ಭಾಗದ ಪ್ರಕಟನ ಕಾರ್ಯವು ಇಷ್ಟು ತಡವಾಗಿ ನಡೆಯಬೇಕಾಯಿತು.

ಅಲ್ಪಸ್ವಲ್ಪ ದೊರೆತ ಆರ್ಥಿಕ ನೆರವಿನೊಡನೆ ಸಾಲವನ್ನೂ ತೆಗೆದು ಮುದ್ರಣಕಾರ್ಯವನ್ನು ಪ್ರಾರಂಭಿಸಿದೆನು. ಬಹುದ್ರವ್ಯ ಸಾಧ್ಯವಾದ ಇದರ ಮುದ್ರಣದ ಖರ್ಚಿನೊಡನೆ ಸಾಲದ ಬಡ್ಡಿಯೂ ಸೇರುವುದು ಅನಿವಾರ್ಯವಾಯಿತು. ಪರಮಾತ್ಮನ ಪ್ರೇರಣೆಯಿಂದಲೂ, ಉತ್ಸಾಹದಿಂದಲೂ ನಡೆದ ಈ ಗ್ರಂಥದ ಮುದ್ರಣದ ಖರ್ಚು ಎಷ್ಟೇ ಹೆಚ್ಚಾದರೂ ಇದರಿಂದ ಹೆದರಿ ಮನಸ್ಸು ಹಿಂಜರಿಯಲಿಲ್ಲ. ಪ್ರಾರಂಭದಲ್ಲಿ ಅತ್ಯಲ್ಪವಾಗಿದ್ದರೂ ಕ್ರಮೇಣ ತಕ್ಕಮಟ್ಟಿಗೆ ಪ್ರೋತ್ಸಾಹಕರವಾದ ಆರ್ಥಿಕ ಸಾಹಾಯ್ಯ ದೊರೆತು ಧೈರ್ಯವನ್ನುಂಟುಮಾಡಿದೆ.

## ಕೃತಜ್ಞತಾಪೂರ್ವಕ ಧನ್ಯವಾದಗಳು

ಈ ಶಬ್ದಕೋಶದ ಮುದ್ರಣಕ್ಕಾಗಿ ಇಲ್ಲಿಯವರೆಗೆ ಉದಾರವಾಗಿ ಸಾಹಾಯ್ಯ ಮಾಡಿ ಪ್ರೋತ್ಸಾಹಿಸಿರುವ ನಮ್ಮ ಮೈಸೂರು ಶ್ರೀಮನ್ಮಹಾರಾಜರು ಮತ್ತು ಶ್ರೀಮನ್ಮಹಾರಾಣಿಯವರು, ಭಾರತಸರ್ಕಾರ, ಮೈಸೂರು ಮತ್ತು ಹೈದರಾಬಾದು ಸರ್ಕಾರಗಳು, ಮೈಸೂರು ವಿಶ್ವವಿದ್ಯಾನಿಲಯ, ಮಠಾಧಿಪತಿಗಳು ಮತ್ತು ಸಂಸ್ಕೃತಾಭಿಮಾನಿಗಳಾದ ಆಸ್ತಿಕ ಮಹಾಜನರು ಎಲ್ಲರಿಗೂ ಕೃತಜ್ಞತಾಪೂರ್ವಕ ಅನೇಕ ವಂದನೆಗಳನ್ನು ಅರ್ಪಿಸುತ್ತೇನೆ. [ವಿವರಕ್ಕೆ xxvi ಪುಟದಲ್ಲಿ ನೋಡಿ.]

ನಮ್ಮ ಕೇಂದ್ರ ಸರ್ಕಾರದಲ್ಲಿ ಆರ್ಥಿಕ ಸಾಹಾಯ್ಯಕ್ಕಾಗಿ ನಾನು ಮೂರು ಸಲ ದೆಹಲಿಗೆ ಹೋಗಿದ್ದಾಗಲೂ ಈ ಶಬ್ದಕೋಶದ ಹಸ್ತಪ್ರತಿಯನ್ನೂ, ಮುದ್ರಿತ ಪುಟಗಳನ್ನೂ ನೋಡಿ ಸಂತೋಷಪಟ್ಟು ಅಮೂಲ್ಯವೂ, ಉಪಯುಕ್ತವೂ ಆದ ಅನೇಕ ಸಲಹೆಗಳನ್ನು ನೀಡಿ ಪ್ರೋತ್ಸಾಹಿಸಿದ ನಮ್ಮ ಭಾರತದ

| | |
|---|---|
| ಉಪರಾಷ್ಟ್ರಪತಿ ಭಾರತರತ್ನ | ಡಾ॥ ಎಸ್. ರಾಧಾಕೃಷ್ಣನ್ ರವರು |
| ಲೋಕಸಭಾಧ್ಯಕ್ಷ | ಶ್ರೀ ಎಮ್. ಅನಂತಶಯನಂ ಅಯ್ಯಂಗಾರ್ ಅವರು |
| ಕೇಂದ್ರ ಸರ್ಕಾರದ ಮಾನ್ಯ ಸಚಿವರಾದ | ಶ್ರೀ ಡಿ. ಪಿ. ಕರಮರಕರ್ ಅವರು |
| ,, | ಶ್ರೀ ಬಿ. ಎನ್. ದಾತಾರ್ ಅವರು |
| ,, ಪ್ರೊ॥ | ಶ್ರೀ ಹುಮಾಯೂನ್ ಕಬೀರ್ ಅವರು |
| ,, | ಶ್ರೀ ಕೆ. ಸಿ. ರೆಡ್ಡಿಯವರು |
| ಲೋಕ ಸಭಾಸದಸ್ಯ | ಶ್ರೀ ಎಸ್. ಕೇಶವಯ್ಯಂಗಾರ್ ಅವರು |

ಈ ಮಹನೀಯರೆಲ್ಲರಿಗೂ ಕೃತಜ್ಞತಾಪೂರ್ವಕ ಅನಂತ ಧನ್ಯವಾದಗಳನ್ನರ್ಪಿಸುತ್ತೇನೆ.

ಅನೇಕ ವರ್ಷಗಳಿಂದಲೂ ಈ ಶಬ್ದಕೋಶದ ವಿಷಯದಲ್ಲಿ ಉತ್ತಮ ಸಲಹೆಗಳನ್ನು ನೀಡುತ್ತಿರುವ ಮತ್ತು ನನ್ನ ಸ್ಥಿತಿಗತಿಗಳನ್ನು ಚೆನ್ನಾಗಿ ಅರಿತಿರುವ ಲೋಕಶಿಕ್ಷಣ ಟ್ರಸ್ಟಿನ ಸಂಸ್ಥಾಪಕರೂ, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರೂ, ಬಿಹಾರಿನ ವಿಶ್ರಾಂತ ರಾಜ್ಯಪಾಲರೂ, ಹಿರಿಯ ಸಾಹಿತಿಗಳೂ, ಉದ್ದಾಮ ದಾರ್ಶನಿಕರೂ ಆದ **ಶ್ರೀ ರಂಗನಾಥ ರಾಮಚಂದ್ರ ದಿವಾಕರ**ರವರು ಈ ಶಬ್ದಕೋಶಕ್ಕೆ ಬೆಳಕನ್ನು ತೋರಲು ಅಮೂಲ್ಯವಾದ ಮುನ್ನುಡಿಯನ್ನು ಬರೆದು ಜನತೆಗೆ ಇದರ ಹಿರಿಮೆಯನ್ನು ತೋರಿಸಿಕೊಟ್ಟು ಪರಮೋಪಕಾರ ಮಾಡಿರುವುದಕ್ಕಾಗಿ ಈ ಮಹನೀಯರಿಗೆ ಕೃತಜ್ಞತಾಪೂರ್ವಕ ಅನೇಕ ವಂದನೆಗಳನ್ನು ಅರ್ಪಿಸುತ್ತೇನೆ.

ಈ ಶಬ್ದಕೋಶದ ರಚನೆಯ ಕಾಲದಲ್ಲಿ ತಮ್ಮ ಅನೇಕ ವಿಧ ಸಲಹೆಗಳನ್ನು ನೀಡಿ ಉಪಕರಿಸಿದ

**ಶ್ರೀಯುತರಾದ—**

1. ರಾವ್ ಬಹದ್ದೂರ್, ಸಚ್ಛಾಸ್ತ್ರಪ್ರವಚನರತ್ನ, ಮಾಧ್ವಭೂಷಣ
   ಪ್ರೊ॥ ಬಿ. ವೆಂಕಟೇಶಾಚಾರ್ಯರು, ಎಂ.ಎ., ಎಫ್.ಇನ್ಸ್ಟ.ಪಿ. (ಲಂಡನ್), ಎಫ್.ಎನ್.ಐ.
2. ರಾಜಸೇವಾಸಕ್ತ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ. ಅವರು
3. ವಿದ್ಯಾವಿಭೂಷಣ ಎಂ. ಪಿ. ಎಲ್. ಶಾಸ್ತ್ರೀ, ಎಂ.ಎ., ಎಂ.ಎಲ್.ಸಿ. ಅವರು
4. ಶ್ರೀ ಕೆ. ಎಸ್. ಧರಣೇಂದ್ರಯ್ಯ, ಎಂ.ಎ., ಬಿ.ಟಿ. ಅವರು
5. ಆಸ್ಥಾನವಿದ್ವಾನ್ ಶ್ರೀ ತಿರು. ತಿರು. ಶ್ರೀನಿವಾಸಗೋಪಾಲಾಚಾರ್ಯರು
6. ,, ,, ನು. ಸೋ. ತಿರುನಾರಾಯಣಯ್ಯಂಗಾರ್ಯರು
7. ,, ,, ಪಿ. ಎಸ್. ದೀಕ್ಷಾಚಾರ್ಯರು
8. ,, ,, ಎಂ. ಎಸ್. ರಂಗನಾಥಾಚಾರ್ಯರು
9. ,, ,, ಎ. ಸುಬ್ಬಯ್ಯಶಾಸ್ತ್ರಿಗಳು
10. ವಿದ್ವಾನ್ ,, ಪಾಣ್ಯಂ ಸುಂದರಶಾಸ್ತ್ರಿಗಳು
11. ,, ,, ಕೆ. ನರಸಿಂಹಾಚಾರ್ಯರು
12. ,, ,, ಹೆಮ್ಮಿಗೆ ದೇಶಿಕಾಚಾರ್ಯರು
13. ಆಗಮಧರ್ಮರಕ್ಷಣಾ ಧುರೀಣ, ಆಗಮರತ್ನ
    ಶ್ರೀ ಆಗಮಿಕ ಕೃಷ್ಣದೀಕ್ಷಿತರು
14. ವಿದ್ವಾನ್ ,, ಎನ್. ರಂಗನಾಥಶರ್ಮರು
15. ಪಂಡಿತಮಣಿ ,, ಪಿ. ಜಿ. ಶ್ರೀನಿವಾಸನ್, ಬಿ.ಎಸ್‌ಸಿ. ಅವರು
16. ಆಯುರ್ವೇದ ವಿದ್ವಾನ್ ಶ್ರೀ ಚಕ್ರವರ್ತಿ ರಾಮಚಂದ್ರಾಚಾರ್ಯರು

ಈ ಮಹನೀಯರೆಲ್ಲರಿಗೂ ನನ್ನ ಕೃತಜ್ಞತಾಪೂರ್ವಕ ಅನಂತ ವಂದನೆಗಳು.

ಈ ಶಬ್ದಕೋಶದ ಹಸ್ತಪ್ರತಿಯ ಪುನರ್ವಿಮರ್ಶೆಯ ಕಾಲದಲ್ಲಿ ತಮ್ಮ ಅಮೂಲ್ಯ ಸಮಯವನ್ನು ಇದಕ್ಕಾಗಿ ವಿನಿಯೋಗಿಸಿ ಉತ್ತಮ ಸಲಹೆಗಳೊಡನೆ ನ್ಯೂನಾತಿರೇಕಗಳನ್ನು ಸರಿಪಡಿಸಿಕೊಟ್ಟು ಉಪಕರಿಸುತ್ತಿರುವ ವ್ಯಾಕರಣ ಪ್ರಾಧ್ಯಾಪಕರಾದ ತರ್ಕ, ವ್ಯಾಕರಣ ಮತ್ತು ವೇದಾನ್ತ ವಿದ್ವಾನ್ ಶ್ರೀ ಟಿ. ಸೀತಾರಾಮಶಾಸ್ತ್ರಿಗಳು ಮತ್ತು

ವೇದಾನ್ತ ವಿದ್ವಾನ್ ಶ್ರೀ ಎಸ್. ಎಸ್. ಅನಂತರಂಗಾಚಾರ್ಯರು, ಬಿ.ಎ. (ಆನರ್ಸ್), ಬಿ.ಟಿ. ಅವರಿಗೂ, ಮುದ್ರಣ ಕಾಲದಲ್ಲಿ ಉಪಯುಕ್ತ ಸಲಹೆಗಳೊಡನೆ ಇದರ ಕರಡಚ್ಚಿನ ಸಂಶೋಧನೆಯನ್ನು ನಡೆಸಿಕೊಟ್ಟು ಉಪಕರಿಸುತ್ತಿರುವ ಪಂಡಿತಮಣಿ ಶ್ರೀ ಪಿ. ಜಿ. ಶ್ರೀನಿವಾಸನ್, ಬಿ.ಎಸ್ಸಿ. ಅವರು ಮತ್ತು ವಿದ್ವಾನ್ ಕನ್ನಡ ಪಂಡಿತ ಶ್ರೀ ಜಿ. ಎಸ್. ಆದಿಶೇಷಯ್ಯನವರು ಈ ಎಲ್ಲ ಮಹನೀಯರಿಗೂ ಅನಂತ ವಂದನೆಗಳು.

ಈಗ್ಗೆ ಐದಾರು ವರ್ಷಗಳಿಂದಲೂ ನನ್ನ ಜೀವಿಕೆಯ ವಿಷಯದಲ್ಲಿ ಉದ್ಭವಿಸಿದ ಸಮಸ್ಯೆಯಿಂದ ನಾನು ಕ್ಲೇಶ ಪಡುತ್ತಿರುವುದನ್ನು ಕಂಡು ನನ್ನ ಜೀವನಕ್ಕಾಗಿ ಆರ್ಥಿಕನೆರವನ್ನು ನೀಡಿ ನನ್ನನ್ನು ಸಲಹಿ ಈ ಶಬ್ದಕೋಶದ ಮುದ್ರಣ ಕಾರ್ಯವು ನಿರ್ವಿಘ್ನವಾಗಿ ನಡೆಯಲು ಸೌಕರ್ಯ ಕಲ್ಪಿಸಿಕೊಟ್ಟು ಉಪಕರಿಸಿದ

| | | |
|---|---|---|
| ಶ್ರೀಯುತರಾದ ವೈದಿಕಧರ್ಮಾಚಾರ್ಯ | ಶ್ರೀ | ಎನ್. ಮಲ್ಲಿಕಾರ್ಜುನಶಾಸ್ತ್ರಿಗಳು, ಎಂ.ಎ. |
| ಪಂಡಿತಮಣಿ | ,, | ಪಿ. ಜಿ. ಶ್ರೀನಿವಾಸನ್, ಬಿ.ಎಸ್ಸಿ. ಅವರು |
| ವಿದ್ವಾನ್ | ,, | ಎನ್. ಕೆ. ಶ್ರೀನಿವಾಸಗೋಪಾಲಾಚಾರ್ಯರು |
| ,, | ,, | ಟಿ. ಸೀತಾರಾಮಶಾಸ್ತ್ರಿಗಳು |
| ,, | ,, | ಹೆಮ್ಮಿಗೆ ದೇಶಿಕಾಚಾರ್ಯರು |
| | ,, | ಎಂ. ಆರ್. ಶಿಂಗ್ರಾಚಾರ್ಯರು |
| | ,, | ಎಸ್. ಶಂಕರಪ್ಪನವರು, ಎಂ.ಎ., ಬಿ.ಟಿ. |
| | ,, | ಎಸ್. ದೇಶಿಕಾಚಾರ್ಯರು, ಎಂ.ಎಸ್ಸಿ. |

ಈ ಮಹನೀಯರೆಲ್ಲರಿಗೂ ಕೃತಜ್ಞತಾಪೂರ್ವಕ ಅನೇಕ ವಂದನೆಗಳು.

ಅನೇಕ ವಿಧತೊಂದರೆಗಳಿಂದ ಈ ಶಬ್ದಕೋಶದ ಮುದ್ರಣಕಾರ್ಯವು ನಿಂತುಹೋಗುವ ಪರಿಸ್ಥಿತಿಯಲ್ಲಿದ್ದಾಗ ಮುದ್ರಣಕಾರ್ಯವು ಸುಗಮವಾಗಿ ನಡೆಯಲು ಪ್ರೋತ್ಸಾಹಕರ ಸನ್ನಿವೇಶವನ್ನು ಕಲ್ಪಿಸಿ ಪರಮೋಪಕಾರಮಾಡಿದ

(1) ಮಾನ್ಯ ಸಚಿವರಾದ ಶ್ರೀ ಟಿ. ಮರಿಯಪ್ಪನವರು, ಬಿ.ಎ., ಎಲ್ಎಲ್.ಬಿ.
(2) ,, ಶ್ರೀ ಕಡಿದಾಳ್ ಮಂಜಪ್ಪನವರು, ಬಿ.ಎ., ಎಲ್ಎಲ್.ಬಿ.
(3) ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾದ ಶ್ರೀ ಎಸ್. ನಿಜಲಿಂಗಪ್ಪನವರು, ಬಿ.ಎ., ಎಲ್ಎಲ್.ಬಿ.
(4) ವಿಶ್ರಾಂತ ಉಪಕುಲಪತಿ ಶ್ರೀ ವಿ. ಎಲ್. ಡಿಸೌಜಾ, ಬಿ.ಎ., ಬಿ.ಕಾಂ. ಅವರು
(5) ಶ್ರೀ ಎಸ್. ಕೆ. ವೆಂಕಟರಂಗಯ್ಯಂಗಾರ್, ಬಿ.ಎ., ಎಲ್ಎಲ್.ಬಿ. ಅವರು
(6) ರಾಜಸೇವಾಸಕ್ತ ಶ್ರೀ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್ಎಲ್.ಬಿ. ಅವರು
(7) ಶ್ರೀ ಎ. ಎನ್. ಮೂರ್ತಿರಾವ್, ಎಂ.ಎ. ಅವರು
(8) ವಿದ್ಯಾವಿಭೂಷಣ ಶ್ರೀ ಎಂ. ಪಿ. ಎಲ್. ಶಾಸ್ತ್ರೀ, ಎಂ.ಎ. ಅವರು
(9) ಪ್ರಜಾವಾಣಿ ಸಂಪಾದಕರಾದ ಶ್ರೀ ಟಿ. ಎಸ್. ರಾಮಚಂದ್ರರಾಯರು
(10) ಶ್ರೀ ಕೆ. ಎಸ್. ಧರಣೇಂದ್ರಯ್ಯ, ಎಂ.ಎ., ಬಿ.ಟಿ. ಅವರು

ಇವರೆಲ್ಲರಿಗೂ ಕೃತಜ್ಞತಾಪೂರ್ವಕ ಅನೇಕ ವಂದನೆಗಳು.

ಈ ಶಬ್ದಕೋಶದ ಮುದ್ರಣಕ್ಕಾಗಿ ಬೃಹತ್ ಪ್ರಮಾಣದಲ್ಲಿ ಬೇಕಾದ ಕಾಗದವನ್ನು ಒದಗಿಸಿಕೊಟ್ಟ ಮೈಸೂರು ಕಾಗದದ ಕಾರ್ಖಾನೆಯವರಿಗೂ, ಈ ಕಾಗದವನ್ನು ಕೊಳ್ಳಲು ಆರ್ಥಿಕ ಸಾಹಾಯ್ಯ ನೀಡಿದ, ಸಂಸ್ಕೃತದಲ್ಲಿ ನಿರತಿಶಯ ಪ್ರೇಮವುಳ್ಳ ಮೈಸೂರು ಬ್ಯಾಂಕಿನ ಜನರಲ್ ಮ್ಯಾನೇಜರವರಾದ ಶ್ರೀ ಎ. ಕೃಷ್ಣಮೂರ್ತಿ, ಎಂ.ಎ. ಅವರಿಗೂ, ಮಧ್ಯೆ ಮಧ್ಯೆ ಮುದ್ರಣಕಾರ್ಯಕ್ಕೆ ವಿಘ್ನ ಸಂಭವಿಸಿದರೂ ಬೇಸರಪಡದೆ ಬಹಳ ತಾಳ್ಮೆಯಿಂದಲೂ, ವಿಶ್ವಾಸದಿಂದಲೂ ಮುದ್ರಣಕಾರ್ಯವನ್ನು ನಡೆಸಿಕೊಡುತ್ತಾ ಈಗ ಈ ಮೊದಲನೆಯ ಭಾಗವನ್ನು ಸುಂದರವಾಗಿ ಮುದ್ರಿಸಿ ಸಿದ್ಧಪಡಿಸಿಕೊಟ್ಟಿರುವ ಬೆಂಗಳೂರು ಪ್ರೆಸ್ಸಿನ ಸೂಪರಿಂಟೆಂಡೆಂಟ್‌ರವರಾದ ಶ್ರೀ ಸಿ. ವಾಸುದೇವರಾವ್ ಮತ್ತು ಶ್ರೀ ಟಿ. ಕೆ. ಬಾಲಕೃಷ್ಣನ್‌ರವರಿಗೂ ಕೃತಜ್ಞತಾಪೂರ್ವಕ ಅನೇಕ ವಂದನೆಗಳನ್ನು ಅರ್ಪಿಸುತ್ತೇನೆ.

ಬೆಂಗಳೂರು,
19–10–1961.

ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ,
ಗ್ರಂಥಕರ್ತ–ಪ್ರಕಾಶಕ.

# ಈ ಶಬ್ದಕೋಶದ ರಚನಾಕ್ರಮ

ಈ ಶಬ್ದಕೋಶದ ರಚನೆಯು ಮೊದಲು ದೇವನಾಗರಿಯ ಸ್ಥೂಲಾಕ್ಷರದಲ್ಲಿ ಸಂಸ್ಕೃತ ಪದಗಳೂ, ಅದರ ಮುಂದೆ ಕನ್ನಡದ ಸ್ಥೂಲಾಕ್ಷರದಲ್ಲಿ ಅವುಗಳ ಉಚ್ಚಾರಣೆಯೂ, ಅನಂತರ (पुं०) (स्त्री०) (न०) (पुंस्त्री०) (पुंन०) (स्त्रीन०) (त्रि०) (वि०) ಎಂದು ಸಂದರ್ಭಾನುಸಾರ ಆಯಾ ಪದಗಳ ಲಿಂಗನಿರ್ದೇಶನ, ಪದಗಳಿಗೆ ಆಯಾ ಲಿಂಗಗಳಲ್ಲಿ ನಿರ್ದಿಷ್ಟವಾದ ಅರ್ಥ, ಪದಗಳಿಗೆ ವ್ಯಾಕರಣ ರೀತ್ಯಾ (ಧಾತು ಅಥವಾ ಪ್ರಾತಿಪದಿಕಗಳಿಗೆ ಪ್ರತ್ಯಯ ಸೇರಿಸಿ) ವ್ಯುತ್ಪತ್ತಿ ಪ್ರದರ್ಶನ, ಕುಂಡಲಿ (    ) ಯಲ್ಲಿ ಸಂಬಂಧಪಟ್ಟ ಸೂತ್ರಗಳ ಸಂಖ್ಯೆ, ಅನೇಕಾರ್ಥಗಳು, ಕಾವ್ಯ ನಾಟಕಾದಿಗಳಲ್ಲಿನ ಮಹಾಕವಿಪ್ರಯೋಗಗಳು ಮತ್ತು ಕೋಶ (ನಿಘಂಟು)ಗಳ ಪ್ರಮಾಣ ಈ ರೀತಿ ನಡೆದಿದೆ.

(1) ಪದಗಳ ಅರ್ಥವನ್ನು ಸಾಧ್ಯವಾದಷ್ಟೂ ಕನ್ನಡ ಪರ್ಯಾಯಪದಗಳಲ್ಲಿ ವಿವರಿಸಿ ಪರ್ಯಾಯಪದಗಳ ಮಧ್ಯದಲ್ಲಿ ಅರ್ಧವಿರಾಮ ( , ) ಚಿಹ್ನೆಯನ್ನು ಕೊಡಲಾಗಿದೆ.

(2) ಅನೇಕಾರ್ಥಗಳಿರುವ ಪದಗಳಲ್ಲಿ ಪ್ರತಿಯೊಂದು ಅರ್ಥಕ್ಕೂ ಅಂತರರಾಷ್ಟ್ರೀಯ ಅಂಕಿಯಲ್ಲಿ ಪ್ರತ್ಯೇಕ ಸಂಖ್ಯೆ ಕೊಡಲಾಗಿದೆ.

(3) ಸಾಧ್ಯವಾದಮಟ್ಟಿಗೆ ಪ್ರತಿಯೊಂದು ಅರ್ಥಕ್ಕೂ ಅನೇಕ ಕಾವ್ಯನಾಟಕಗಳಲ್ಲಿನ ಮಹಾಕವಿಗಳ ಪ್ರಯೋಗಗಳನ್ನು ಕೊಟ್ಟು ಗ್ರಂಥಗಳ ಹೆಸರನ್ನು ಸಂಕೇತಾಕ್ಷರಗಳಲ್ಲಿ ತೋರಿಸಿ ಅವುಗಳ ಸರ್ಗ, ಅಂಕ, ಅಧ್ಯಾಯ, ಪರಿಚ್ಛೇದ, ಶ್ಲೋಕಗಳು ಮುಂತಾದುವುಗಳನ್ನು ಸಂಖ್ಯೆಯಲ್ಲಿ ತೋರಿಸಲಾಗಿದೆ.

(4) ಕಾವ್ಯಪ್ರಯೋಗಗಳು, ಧಾತು ಅಥವಾ ಪ್ರಾತಿಪದಿಕ, ಅವುಗಳ ಮುಂದೆ ವಿಧಿಸಲ್ಪಡುವ ಪ್ರತ್ಯಯಗಳು ಇವನ್ನು ದೇವನಾಗರಿ ಅಕ್ಷರದಲ್ಲಿ ಕೊಡಲಾಗಿದೆ.

(5) ಧಾತುಗಳ ಅರ್ಥವನ್ನೂ, ಧಾತು ಅಥವಾ ಪ್ರಾತಿಪದಿಕಗಳ ಮುಂದಿನ ಪ್ರತ್ಯಯಗಳನ್ನು ವಿಧಿಸುವ ಸೂತ್ರಗಳ ಸಂಖ್ಯೆಗಳನ್ನೂ ಕುಂಡಲಿ (    ) ಯೊಳಗೂ, ಪ್ರತ್ಯಯಗಳನ್ನೂ ಕಾವ್ಯಪ್ರಯೋಗೋದಾಹರಣೆಗಳನ್ನೂ "  " ಈ ಚಿಹ್ನೆಯೊಳಗೂ ಸೇರಿಸಲಾಗಿದೆ.

(6) ಕಾವ್ಯಪ್ರಯೋಗಗಳ ಉದಾಹರಣೆಯ ಶ್ಲೋಕಗಳ ಮತ್ತು ಪ್ರತ್ಯಯ ವಿಧಾಯಕ ಸೂತ್ರಗಳ ಸಂಖ್ಯೆಗಳನ್ನು ದೇವನಾಗರಿ ಅಂಕಿಯಲ್ಲಿ ಕೊಡಲಾಗಿದೆ.

(7) ಅಕಾರಾದಿ ಕ್ರಮದಲ್ಲಿ ಕೊಟ್ಟಿರುವ ಸಂಸ್ಕೃತ ಪದಗಳಿಗೆ ಆಯಾ ಲಿಂಗಗಳಲ್ಲಿ ರೂಪಗಳನ್ನು ಕೊಡದೆ ಅವುಗಳ ಪ್ರಕೃತಿಯನ್ನು ಮಾತ್ರ अगूढ, अग्निजन्मन्, अन्तर्यामिन्, उच्चैःश्रवस् ಈ ರೀತಿ ಕೊಡಲಾಗಿದೆ.

(8) ವಿಶೇಷಣ ಪದಗಳಿಗೆ ಅವಶ್ಯವಾದ ಕಡೆ ಅವುಗಳ ಸ್ತ್ರೀಲಿಂಗದ ರೂಪಗಳನ್ನು ಸಂಸ್ಕೃತ ಮತ್ತು ಕನ್ನಡ ಅಕ್ಷರಗಳಲ್ಲಿ अनुविधायिनी ಅನುವಿಧಾಯಿನೀ, अलङ्कर्त्री ಅಲಂಕರ್ತ್ರೀ ಈ ರೀತಿ ಕೊಡಲಾಗಿದೆ.

(9) ಸ್ತ್ರೀಲಿಂಗದ ಪದಗಳನ್ನು ಸ್ತ್ರೀಲಿಂಗದ ರೂಪದಲ್ಲೇ अपर्णा, ईक्षा, ईहा ಈ ರೀತಿ ಕೊಡಲಾಗಿದೆ.

(10) ಸಮಸ್ತ ಪದಗಳನ್ನು ಆಯಾ ಮೂಲ ಪದಗಳಾದ आत्मन्, इन्दु, इन्द्रिय ಇತ್ಯಾದಿ ಪದಗಳ ಕೆಳಗೆ —प्रभवः, — मौलिः, — ग्रामः ಎಂದು ಕೊಡದೆ आत्मप्रभवः, इन्दुमौलिः, इन्द्रियग्रामः ಈ ರೀತಿ ಪ್ರತ್ಯೇಕ ಪದಗಳಾಗಿ ಕೊಡಲಾಗಿದೆ.

(11) ಕೆಲವು ಮುಖ್ಯ ಧಾತುಗಳನ್ನು ವರ್ಣಕ್ರಮದಲ್ಲಿ ಕೊಟ್ಟು ಅವುಗಳ ಮುಖ್ಯ ಲಕಾರಗಳ ರೂಪಗಳನ್ನು ತೋರಿಸಲಾಗಿದೆ.

(12) ಬೇರೆ ಬೇರೆ ಅರ್ಥಗಳಲ್ಲಿ ಬೇರೆ ಬೇರೆ ಧಾತುಗಳಿಂದ ನಿಷ್ಪನ್ನವಾಗುವ ಸಮಾನಾನುಪೂರ್ವಿಯ (ಒಂದೇ ವಿಧ ರೂಪದ) ಪದಗಳ ವ್ಯುತ್ಪತ್ತಿಯನ್ನು ಸಂಬಂಧಪಟ್ಟ ಆಯಾ ಧಾತುಗಳ ಪ್ರದರ್ಶನಪೂರ್ವಕ ತೋರಿಸಲಾಗಿದೆ.

**ಉದಾ.:** "इत" ಪದವು ಗಮನಾರ್ಥದಲ್ಲಿ इण् ಧಾತುವಿನಿಂದಲೂ, ಸ್ಮರಣಾರ್ಥದಲ್ಲಿ इक् ಧಾತುವಿನಿಂದಲೂ ನಿಷ್ಪನ್ನವಾಗಿದೆ. "इष्ट" ಪದವು ಯಾಗವೆಂಬ ಅರ್ಥದಲ್ಲಿ यज ಧಾತುವಿನಿಂದಲೂ, ಅಪೇಕ್ಷೆಯೆಂಬ ಅರ್ಥದಲ್ಲಿ इषु ಧಾತುವಿನಿಂದಲೂ ನಿಷ್ಪನ್ನವಾಗಿದೆ.

(13) ಕಾವ್ಯಗಳಲ್ಲಿ ವಿಶೇಷವಾಗಿ ಪ್ರಯೋಗಿಸಲ್ಪಡುವ ಕೆಲವು ಮುಖ್ಯ ಧಾತುಗಳಿಗೆ ದಶಲಕಾರಗಳಲ್ಲಿಯೂ ರೂಪಗಳನ್ನು ತೋರಿಸಿ ಅವಶ್ಯವಾದೆಡೆ ಣ್ಯಂತ, ಸನ್ನಂತ, ಕೃದಂತ ರೂಪಗಳನ್ನೂ ಕೊಡಲಾಗಿದೆ. अस (भुवि), असु (क्षेपणे), इण् (गतौ), ईक्ष (दर्शने) ಇತ್ಯಾದಿ ನೋಡಿ.

(14) ಮುಖ್ಯವಾದ ಧಾತುಗಳಿಗೆ ಉಪಸರ್ಗಗಳು ಸೇರಿದಾಗ ಉಂಟಾಗುವ ಅರ್ಥಭೇದಗಳನ್ನು ಪ್ರಯೋಗಗಳ ಉದಾಹರಣೆಗಳೊಡನೆ ಕೊಡಲಾಗಿದೆ. असु (क्षेपणे), इण् (गतौ), ईक्ष (दर्शने) ಇತ್ಯಾದಿ ನೋಡಿ.

(15) ಈ ಶಬ್ದಕೋಶದಲ್ಲಿ ಸಾಧ್ಯವಾದಷ್ಟುಮಟ್ಟಿಗೆ ಎಲ್ಲಾ ಶಾಸ್ತ್ರಗಳಿಗೂ ಸಂಬಂಧಿಸಿದ ಮುಖ್ಯ ಪದಗಳಿಗೆ ವಿವರಗಳನ್ನು ಕೊಡಲಾಗಿದೆ.

**ಅಲಂಕಾರ:** अगूढः, अभिधामूला, अनन्वयः, अन्योन्यम्, अप्रस्तुतप्रशंसा, अद्भुतम्, अर्धभ्रमः, आलम्बनम्, उद्दीपनम् ಇತ್ಯಾದಿ ನೋಡಿ.

**ತರ್ಕ:** अन्यथासिद्धः, अन्वयः, अयुतसिद्धः,—सिद्धिः, असिद्धः, असिद्धिः, असाधारणम्, उपमानम्, उपमितिः ಇತ್ಯಾದಿ ನೋಡಿ.

**ವ್ಯಾಕರಣ:** अकर्मकः, अपादानम्, आगमः, आदेशः, आभ्यन्तरः, उपसर्गः, उपसर्जनम् ಇತ್ಯಾದಿ ನೋಡಿ.

**ವೇದಾನ್ತ:** अद्वैतदर्शनम्, अनिर्वचनीयख्यातिः, अन्यथाख्यातिः, अविद्या, आत्मन्, जैनदर्शनम्, द्वैतदर्शनम्, विशिष्टाद्वैतम्, शक्तिविशिष्टाद्वैतम् ಇತ್ಯಾದಿ ನೋಡಿ.

**ಮೀಮಾಂಸಾ:** अर्थवादः, अर्थापत्तिः ಇತ್ಯಾದಿ ನೋಡಿ.

**ಜೈನ:** अवसर्पिणी, उत्सर्पिणी, जैनदर्शनम् ಇತ್ಯಾದಿ ನೋಡಿ.

**ಜ್ಯೋತಿಷ:** अङ्गारकः, अब्दः, अमृतम्, आयुस्, उषा, करणम्, कल्पः, ग्रहः, चन्द्रः, योगः, रविः ಇತ್ಯಾದಿ ನೋಡಿ.

**ಧರ್ಮಶಾಸ್ತ್ರ:** अर्धोदयः, उपनयनम्, उपपातकम् ಇತ್ಯಾದಿ ನೋಡಿ.

**ಆಗಮ:** अर्चा, आगमः, उपचारः ಇತ್ಯಾದಿ ನೋಡಿ.

**ಆಯುರ್ವೇದ:** आधिदैविकम्, अस्थि, उपाङ्गम्, उष्णोदकम् ಇತ್ಯಾದಿ ನೋಡಿ.

**ರಾಜನೀತಿ:** आसनम्, उदास्थितः, उपायः, गुणः, शक्तिः ಇತ್ಯಾದಿ ನೋಡಿ.

**ನಾಟ್ಯಶಾಸ್ತ್ರ:** अङ्कावतारः, अभिनयः, रूपकम्, सन्धिः ಇತ್ಯಾದಿ ನೋಡಿ.

**ಛಂದಸ್ಸು:** आर्या, आर्यागीतिः, इन्द्रवज्रा, उद्गीतिः, उपजातिः, उपेन्द्रवज्रा, तोटकम्, मालिनी, रथोद्धता, वंशस्थम्, वसन्ततिलकम् ಇತ್ಯಾದಿ ನೋಡಿ.

(16) ಪುರಾಣಕ್ಕೆ ಸಂಬಂಧಿಸಿದ ಪದಗಳಲ್ಲಿ ಮುಖ್ಯವಾದುವುಗಳಿಗೆ ಆಯಾ ವ್ಯಕ್ತಿಗಳ ವಿಷಯವನ್ನು ಸಂಗ್ರಹಿಸಿ ಕೊಡಲಾಗಿದೆ:

अक्रूरः, अगस्त्यः, अणिमाण्डव्यः, अनसूया, अम्बरीषः, अर्जुनः, अश्वत्थामन्, उपरिचरः, उर्वशी, ऋश्यशृङ्गः, और्वः, कचः, कर्णः, कृष्णः, दुर्योधनः, धृतराष्ट्रः, नहुषः, ययातिः ಇತ್ಯಾದಿ.

ಒಬ್ಬೊಬ್ಬ ಕೋಶ (ನಿಘಂಟು) ಕಾರರೂ ಶಬ್ದಗಳ ಲಿಂಗಗಳನ್ನು ವಿವಿಧವಾಗಿ ಹೇಳಿರುವುದರಿಂದ ಶಬ್ದಗಳ ಲಿಂಗನಿರ್ಣಯ ವಿಷಯದಲ್ಲಿ ಮಹಾ ಕವಿಗಳ ಪ್ರಯೋಗಗಳೇ ನಮಗೆ ಪ್ರಮಾಣ.

ಈ ಶಬ್ದಕೋಶವು ಜನತೆಗೆ ಹೆಚ್ಚು ಉಪಯುಕ್ತವಾಗಿರಬೇಕೆಂಬ ಆಶಯದಿಂದ ಅನೇಕ ನಿಘಂಟುಗಳು, ಕಾವ್ಯ, ನಾಟಕ, ಪುರಾಣ, ಅಲಂಕಾರ, ತರ್ಕ, ವ್ಯಾಕರಣ, ವೇದಾನ್ತ ಮುಂತಾದ ಅನೇಕ ಶಾಸ್ತ್ರಗಳು, ಹಿರಿಯ ವಿದ್ವಾಂಸರಿಂದ ರಚಿತವಾದ ಅನೇಕ ಸಂಸ್ಕೃತ–ಸಂಸ್ಕೃತ, ಸಂಸ್ಕೃತ–ಇಂಗ್ಲಿಷ್, ಮತ್ತು ಇಂಗ್ಲಿಷ್–ಕನ್ನಡ ಶಬ್ದ ಕೋಶಗಳು ಎಲ್ಲವನ್ನೂ ಪರಿಶೀಲಿಸಿ ಬಹಳ ಎಚ್ಚರಿಕೆಯಿಂದ ಇದನ್ನು ರಚಿಸಲಾಗಿದೆ.

ಇದರಲ್ಲಿ ಸೇರದೆ ಬಿಟ್ಟುಹೋಗಿರುವ ಕೆಲವು ಮುಖ್ಯ ಪದಗಳನ್ನೂ, ಆಧುನಿಕ ವ್ಯವಹಾರಕ್ಕೆ ಉಪಯುಕ್ತವಾದ ವಿಜ್ಞಾನ, ವಾಣಿಜ್ಯ, ರಾಜಕೀಯ ಇವಕ್ಕೆ ಸಂಬಂಧಿಸಿದ ಪದಗಳನ್ನೂ ಪರಿಶಿಷ್ಟದಲ್ಲಿ (ಕೊನೆಯಲ್ಲಿ) ಕೊಡಲಾಗುವುದು.

# सङ्केताक्षराणि

## ಈ ಶಬ್ದಕೋಶದಲ್ಲಿ ಉಪಯೋಗಿಸಲ್ಪಟ್ಟಿರುವ ಸಂಕೇತಾಕ್ಷರಗಳ ವಿವರಣೆ

**Abbreviations Used in this Dictionary**

## ಗ್ರಂಥಗಳು, ಗ್ರಂಥಕರ್ತರು ಮತ್ತು ನಿಘಂಟು (ಕೋಶ)ಗಳು

| | |
|---|---|
| अ० | .. अध्यायः |
| अग्निपु० | .. अग्निपुराणम् |
| अत्रिसं० | .. अत्रिसंहिता |
| अनर्घ० | .. अनर्घराघवम् |
| अनु० | .. अनुशासनपर्व |
| अभि० | .. अभिधावृत्तिमातृका |
| अभि० चि० | .. अभिधानचिन्तामणिः (निघ०) |
| अभि० र० | .. अभिधानरत्नमाला (निघ०) |
| अम० | .. अमरकोशः (निघ०) |
| अमरु० | .. अमरुशतकम् |
| अवन्तीखं० | .. अवन्तीखण्डः |
| अष्टाङ्ग० | .. अष्टाङ्गहृदयम् |
| आत्मसि० | .. आत्मसिद्धिः |
| आदि० | .. आदिपर्व |
| आदित्यहृ० | .. आदित्यहृदयम् |
| आप० | .. आपस्तम्बः |
| आप० ध० | .. आपस्तम्बधर्मसूत्रम् |
| आश्व० | .. आश्वमेधिकपर्व |
| आश्व० गृ० | .. आश्वलायनगृह्यसूत्रम् |
| आश्व० गृ० का० | .. आश्वलायनगृह्यकारिका |
| आश्व० श्रौ० सू० | .. आश्वलायनश्रौतसूत्रम् |
| आह्निक० | .. आह्निककाण्डः |
| उ० रा० | .. उत्तररामचरितम् |
| उद्भ० | .. उद्भटः |
| उद्योग० | .. उद्योगपर्व |
| ऋ० | .. ऋग्वेदः |
| ऋ० भा० | .. ऋग्वेदभाष्यम् |
| ऋतुसं० | .. ऋतुसंहारकाव्यम् |
| एका० | .. एकाक्षरकोशः (निघ०) |
| कठ० | .. कठोपनिषत् |
| कथास० | .. कथासरित्सागरः |
| कल्पद्रु० | .. कल्पद्रुकोशः (निघ०) |

| | |
|---|---|
| कश्यप० | .. कश्यपसंहिता |
| कात्या० | .. कात्यायनः |
| काद० | .. कादम्बरी |
| काम० नी० ಅಥವಾ कामन्द० | .. कामन्दकीयनीतिसारः |
| कामिका० | .. कामिकागमः |
| कारि० | .. कारिकावली |
| काला० | .. कालामृतम् |
| कालिकापु० | .. कालिकापुराणम् |
| काव्यप्र० | .. काव्यप्रकाशः |
| काव्या० | .. काव्यादर्शः |
| का० सू० ಅಥವಾ काव्या० सू० | .. काव्यालङ्कारसूत्रवृत्तिः |
| काशीखं० | .. काशीखण्डः |
| किरा० | .. किरातार्जुनीयम् |
| कुमा० | .. कुमारसम्भवम् |
| कुव० | .. कुवलयानन्दः |
| कूर्मपु० | .. कूर्मपुराणम् |
| गङ्गाल० | .. गङ्गालहरी |
| गीतगो० | .. गीतगोविन्दकाव्यम् |
| गीता | .. श्रीमद्भगवद्गीता |
| गृह्यप० | .. गृह्यपरिशिष्टम् |
| गौतमध० | .. गौतमधर्मसूत्रम् |
| चक्र० ಅಥವಾ चक्रद० | .. चक्रदत्तः |
| चं० भा० | .. चंम्पूभारतम् |
| चं० रा० | .. चम्पूरामायणम् |
| चन्द्रा० | .. चन्द्रालोकः |
| चरक० | .. चरकसंहिता |
| चाणक्य० | .. चाणक्यशतकम् |

| | |
|---|---|
| चिकित्सा० | चिकित्सास्थानम् |
| चोरप० | चोरपञ्चाशिका |
| छन्दोमं० | छन्दोमञ्जरी |
| छान्दोग्य० | छान्दोग्योपनिषत् |
| जा० उ० | जाबालोपनिषत् |
| ज्योतिर्वि० | ज्योतिर्विदाभरणम् |
| ज्योतिस्० | ज्योतिस्तत्त्वम् |
| त० स० | तर्कसंग्रहः |
| तन्त्रसा० | तन्त्रसारः |
| तत्त्वा० सू० | तत्त्वार्थसूत्रम् |
| तै० उ० | तैत्तिरीयोपनिषत् |
| तैत्ति० सं० | तैत्तिरीयसंहिता |
| त्रिकाण्ड० | त्रिकाण्डशेषः (निघ०) |
| दशकु० | दशकुमारचरितम् |
| दयाश० | दयाशतकम् |
| दशरू० | दशरूपकम् |
| दा० खं० | दानखण्डः |
| दीपि० | दीपिका |
| देवीपु० | देवीपुराणम् |
| दे० भा० ಅಥವಾ देवीभा० | देवीभागवतम् |
| देवीमा० | देवीमाहात्म्यम् |
| द्विरूप० | द्विरूपकोशः (निघ०) |
| द्रोण० | द्रोणपर्व |
| धर० | धरणिः (निघ०) |
| धर्मसिं० | धर्मसिंधुः |
| नागा० | नागानन्दम् |
| नानार्थर० | नानार्थरत्नमाला (निघ०) |
| नारदसं० | नारदसंहिता |
| निदान० | निदानस्थानम् |
| नि० ಅಥವಾ निरु० | निरुक्तम् |
| निर्णया० | निर्णयामृतम् |
| नीलकं० | नीलकण्ठविजयचम्पूः |
| नैष० | नैषधीयचरितम् |
| न्यायसि० | न्यायसिद्धाञ्जनम् |
| पञ्चतं० | पञ्चतन्त्रम् |
| पञ्चद० | पञ्चदशी |

| | |
|---|---|
| पद्मपु० ಅಥವಾ पाद्मपु० | पद्मपुराणम् |
| परा० | पराशरस्मृतिः |
| पा० शि० | पाणिनीयशिक्षा |
| पा० सू० | पाणिनीयसूत्रम् |
| पा० यो० सू० | पातञ्जलयोगसूत्रम् |
| पाद्मसं० | पाद्मसंहिता |
| पु० सू० | पुरुषसूक्तम् |
| प्र० रा० | प्रसन्नराघवम् |
| प्र० रु० | प्रतापरुद्रीयम् |
| प्रबोध० | प्रबोधचन्द्रोदयम् |
| बृह० | बृहज्जातकम् |
| बृह० ಅಥವಾ बृहत् | बृहत्कथा |
| बृहत्सं० | बृहत्संहिता |
| बृहदा० | बृहदारण्यकोपनिषत् |
| ब्रह्मपु० ಅಥವಾ ब्राह्मपु० | ब्राह्मपुराणम् |
| ब्रह्मवै० | ब्रह्मवैवर्तपुराणम् |
| ब्रं० सू० | ब्रह्मसूत्रम् |
| भट्टि० | भट्टिकाव्यम् |
| भ० ना० | भरतनाट्यशास्त्रम् |
| भर्तृ० | भर्तृहरिसुभाषितम् |
| भविष्य० ಅಥವಾ भविष्यपु० | भविष्यपुराणम् |
| भा० | महाभारतम् |
| भाग० | भागवतम् |
| भा० वि० ಅಥವಾ भामि० वि० | भामिनीविलासः |
| भावप्र० | भावप्रकाशः |
| भाषाप० | भाषापरिच्छेदः |
| भीष्म० | भीष्मपर्व |
| मत्स्यपु० | मत्स्यपुराणम् |
| मनु० | मनुस्मृतिः |
| म० वि० | महावीरचरितम् |
| माघ० | माघकाव्यम् |
| माण्डूक्य० | माण्डूक्योपनिषत् |
| मार्क० | मार्कण्डेयपुराणम् |
| माल० | मालविकाग्निमित्रम् |

| | |
|---|---|
| मालती० | मालतीमाधवम् |
| मिता० | मिताक्षरा |
| मुक्ता० | मुक्तावली |
| मुद्रा० | मुद्राराक्षसम् |
| मु० चि० | मुहूर्तचिन्तामणिः |
| मु० मा० | मुकुन्दमाला |
| मु० द० ಅಥವಾ मुहू० द० | मुहूर्तदर्पणम् |
| मृच्छ० | मृच्छकटिकम् |
| मेघ० | मेघसन्देशः |
| मेदि० | मेदिनीकोशः (निघ०) |
| याद० | यादवाभ्युदयः |
| याज्ञ० | याज्ञवल्क्यस्मृतिः |
| योगर० | योगरत्नाकरः |
| योगसु० | योगसुधाकरः |
| रघु० | रघुवंशम् |
| रघु० ग० | रघुवीरगद्यम् |
| रतिमं० | रतिमञ्जरी |
| रत्न० | रत्नकोशः (निघ०) |
| रत्नमा० | रत्नमाला (निघ०) |
| रत्नसा० | रत्नसारः |
| रत्ना० | रत्नावलिः |
| रसगं० | रसगङ्गाधरः |
| रसमं ० | रसमञ्जरी |
| रा० भा० | रामानुजभाष्यम् |
| राजत० | राजतरङ्गिणी |
| राजनि० | राजनिघण्टुः (निघ०) |
| रामा० | रामायणम् |
| लिङ्गा० | लिङ्गानुशासनम् |
| लीला० | लीलावती |
| वन० | वनपर्व |
| वराहपु० | वराहपुराणम् |
| वाक्यप० | वाक्यपदीयम् |
| वाग्भ० | वाग्भटः |
| वात्स्या० सू० | वात्स्यायनकामसूत्रम् |
| वा० पु० | वामनपुराणम् |
| वायुपु० | वायुपुराणम् |
| वि० दे० च० | विक्रमाङ्कदेवचरितम् |
| विक्र० | विक्रमोर्वशीयम् |
| विरा० | विराटपर्व |
| विश्वगु० | विश्वगुणादर्शः |
| विश्व० | विश्वप्रकाशः (निघ०) |
| वि०ध० | विष्णुधर्मोत्तरम् |
| वि० पु० ಅಥವಾ विष्णुपु० | विष्णुपुराणम् |
| विष्णुर० | विष्णुरहस्यम् |
| वि० स० | विष्णुसहस्रनामस्तोत्रम् |
| वृ० र० | वृत्तरत्नाकरः |
| वेणी० | वेणीसंहारम् |
| वैज० | वैजयन्ती (निघ०) |
| वैद्यना० | वैद्यनाथीयम् |
| वैराग्यपं० | वैराग्यपञ्चकम् |
| वैरा० पं० | वैराग्यपञ्चाशत् |
| वै० सू० | वैशषिकसूत्रम् |
| शङ्करदि० | शङ्करदिग्विजयः |
| शङ्खलि० | शङ्खलिखितः |
| शत० ब्रा० | शतपथब्राह्मणम् |
| श० कल्प० | शब्दार्थकल्पतरुः (निघ०) |
| शब्दचि० | शब्दचिन्तामणिः (निघ०) |
| शब्दभे० ಅಥವಾ शब्दभेद० | शब्दभेदप्रकाशः (निघ०) |
| शब्दर० | शब्दरत्नावली (निघ०) |
| शल्य० | शल्यपर्व |
| शाकु० | शाकुन्तलम् |
| शां० भा० | शाङ्करभाष्यम् |
| शान्ति० | शान्तिपर्व |
| शाश्व० | शाश्वतकोशः (निघ०) |
| शिवपु० | शिवपुराणम् |
| शि० स० | शिवसहस्रनामस्तोत्रम् |
| शुक्र० | शुक्रनीतिसारः |
| श्रुतप्र० | श्रुतप्रकाशिका |
| षट्पं० | षट्पञ्चाशिका |
| सं० दा० | सङ्गीतदामोदरः |
| सच्चरित्रर० | सच्चरित्ररक्षा |
| सनत्कु० सं० | सनत्कुमारसंहिता |
| सभा० | सभापर्व |
| स० द० सं० | सर्वदर्शनसंग्रहः |

| | | | |
|---|---|---|---|
| सर्वार्थ० | .. सर्वार्थसिद्धिः | स्तो० र० | .. स्तोत्ररत्नम् |
| स० ना० भा० | .. सहस्रनामभाष्यम् | स्वर्गा० | .. स्वर्गारोहणपर्व |
| स० ना० निरु० | .. सहस्रनामनिरुक्तिः | हंस० | .. हंससन्देशः |
| सां० का० | .. साङ्ख्यकारिका | हठ० | .. हठयोगप्रदीपिका |
| सा० द० | .. साहित्यदर्पणः | हनु० ना० | .. हनुमन्नाटकम् |
| सि० कौ० | .. सिद्धान्तकौमुदी | हयग्री० | .. हयग्रीवस्तोत्रम् |
| सुं० | .. सुन्दरकाण्डः | हरिवं० | .. हरिवंशः |
| सुभा० | .. सुभाषितम् | हला० | .. हलायुधः (निघ०) |
| सुश्रु० ಅಥವಾ सुश्रुत० | .. सुश्रुतसंहिता | हारा० | .. हारावलिः (निघ०) |
| सूत्र० | .. सूत्रस्थानम् | हारीत० | .. हारीतस्मृतिः |
| सू० सि० | .. सूर्यसिद्धान्तः | हितो० | .. हितोपदेशः |
| स्कं० | .. स्कन्धः | हेम० | .. हेमकोशः (निघ०) |
| स्कान्द० | .. स्कान्दपुराणम् | हेमाद्रि० | .. हेमाद्रिप्रायश्चित्तम् |

## ವ್ಯಾಕರಣ ಮತ್ತು ಇತರ ವಿಷಯಗಳ ಸಂಕೇತಾಕ್ಷರಗಳು

## Grammatical and Other Abbreviations

| | | | |
|---|---|---|---|
| अक० | .. अकर्मकः | क्रि० वि० | .. क्रियाविशेषणम् |
| अदा० | .. अदादिः | क्र्या० | .. क्र्यादिः |
| अधि० | .. अधिकरणे | ग० | .. गणसूत्रम् |
| अनि० | .. अनिट् | गौरा० | .. गौरादित्वात् |
| अभूतत० | .. अभूततद्भावे | चुरा० | .. चुरादिः |
| अवा० | .. अवादिः | जाति० | .. जातित्वात् |
| अव्य० | .. अव्ययम् | जुहो० | .. जुहोत्यादिः |
| अव्ययी० | .. अव्ययीभावसमासः | तना० | .. तनादिः |
| आ० ಅಥವಾ आत्म० | .. आत्मनेपदी | तुदा० | .. तुदादिः |
| उ० ಅಥವಾ उणा० | .. उणादिः | त्रि० | .. त्रिलिङ्गः |
| उदा० ಅಥವಾ ಉದಾ. | .. उदाहरणम् | दि० ಅಥವಾ दिवा० | .. दिवादिः |
| उभ० | .. उभयपदी | द्विव० | .. द्विवचनम् |
| कण्डू० | .. कण्ड्वादिः | न० | .. नपुंसकलिङ्गः |
| कर० | .. करणे | न० त० | .. नञ्तत्पुरुषः |
| कर्त० | .. कर्तरि | न० ब० | .. नञ्बहुव्रीहिः |
| कर्म० | .. कर्मणि | ना० धा० ಅಥವಾ नामधा० | .. नामधातुः |
| कर्मकर्त० | .. कर्मकर्तरि | निघ० | .. निघण्टुः |
| कर्मव्य० | .. कर्मव्यतीहारे | निपा० | .. निपातः |

| | |
|---|---|
| प० ಅಥವಾ<br>पर० | .. परस्मैपदी |
| परनि० | .. परनिपातः |
| पररू० | .. पररूपम् |
| परि० | .. परिभाषा |
| पुं० | .. पुंल्लिङ्गः |
| पु० | .. पुटम् |
| पुंन० | .. पुंनपुंसकलिङ्गः |
| पुंस्त्री | .. पुंस्त्रीलिङ्गः |
| पृषो० | .. पृषोदरादिः |
| प्रा० स० | .. प्रादिसमासः |
| ब० व० | .. बहुवचनम् |
| बाहु० | .. बाहुलकात् |
| भ्वा० | .. भ्वादिः |
| मयूर० | .. मयूरव्यंसकादिः |
| माध० धातु० | .. माधवीयधातुवृत्तिः |
| रुधा० | .. रुधादिः |
| लाक्ष० | .. लाक्षणिकः |
| वा० | .. वार्तिकम् |
| वि० | .. विशेषणम् |
| विभ० | .. विभक्त्यर्थे |
| शक० | .. शकन्ध्वादिः |
| सक० | .. सकर्मकः |
| सम्प० | .. सम्पदादिः |
| सम्प्र० | .. सम्प्रसारणम् |
| सम्प्रदा० | .. सम्प्रदानम् |
| से० | .. सेट् |
| स्त्री० | .. स्त्रीलिङ्गः |
| स्त्रीन० | .. स्त्रीनपुंसकलिङ्गः |
| स्वा० | .. स्वादिः |

ವಿ. ಸೂ.: (1) बृह० ಎಂಬುದು बृहज्जातक ಎಂಬುದರ ಸಂಕೇತ. ಕೆಲವು ಕಡೆ बृहत्कथा ಎಂಬುದರ ಸಂಕೇತವೂ बृह० ಎಂದು ಬಿದ್ದಿರುವುದರಿಂದ ಸಂದರ್ಭಾನುಸಾರ ಅರ್ಥಮಾಡಿಕೊಳ್ಳಬೇಕು.

(2) ಹೀಗೆಯೇ ಪದಗಳ ಅರ್ಥಕ್ಕೆ ಸಂಬಂಧಿಸಿದ, ಕುಂಡಲಿಯೊಳಗಿನ (पु०) ಎಂಬುದು पुंल्लिङ्गः ಎಂಬುದಕ್ಕೂ, ಗ್ರಂಥಗಳ ಉದಾಹರಣೆಗಳ ಪಕ್ಕದಲ್ಲಿರುವ पु० ಎಂಬುದು पुटम् ಎಂಬುದಕ್ಕೂ ಸಂಕೇತ.

## शब्दार्थकौस्तुभः

### 500 ಪುಟಗಳ ಐದು ಭಾಗಗಳಲ್ಲಿ

ಈ ಸಂಸ್ಕೃತ–ಕನ್ನಡ ಶಬ್ದಕೋಶದ ಪುಟಗಳು 2,000 ದಿಂದ 2,500 ಕ್ಕೆ ಹೆಚ್ಚುವುದಾಗಿ ಅಂದಾಜಾಗಿದೆ. ಈಚೆಗೆ ಮುದ್ರಣದ ಖರ್ಚು ಹೆಚ್ಚಿರುವುದಾದರೂ ಸಂಸ್ಕೃತ ಭಾಷಾಜಿಜ್ಞಾಸುಗಳಾದ ಎಲ್ಲರ ಸೌಕರ್ಯಕ್ಕಾಗಿ ಹಿಂದಿನ ದರವನ್ನೇ ಅನುಸರಿಸಿ ಲಾಭದ ಅಪೇಕ್ಷೆಯಿಲ್ಲದೆ ಇದರ ಬೆಲೆಯನ್ನು 75 ರೂ. ಗಳಿಗೆ ನಿಗದಿಮಾಡಲಾಗಿದೆ.

ಇದಕ್ಕೆ ಚಂದಾದಾರರಾಗಲು ಅಪೇಕ್ಷಿಸುವವರು ಮೊದಲು ಪೂರ್ತಿ ಹಣವನ್ನು ಒಂದೇ ಮೊತ್ತದಲ್ಲಿ ಕೊಟ್ಟು ತಮ್ಮ ಹೆಸರನ್ನು ರಿಜಿಸ್ಟರ್ ಮಾಡಿಸಿಕೊಳ್ಳಬಹುದು.

ಪೂರ್ತಿ ಹಣವನ್ನು ಕೊಟ್ಟು ಚಂದಾದಾರರಾಗುವವರಿಗೆ 1962ರ ಮಾರ್ಚಿ ಕೊನೆಯವರೆಗೂ ಇದರ ರಿಯಾಯಿತಿ ಬೆಲೆ 65 ರೂ. ಗಳು ಮಾತ್ರ.

ಇದರ 500 ಪುಟಗಳ ಮೊದಲನೆಯ ಭಾಗವು ಈಗ ಸಿದ್ಧವಾಗಿದೆ. ಉಳಿದ ನಾಲ್ಕು ಭಾಗಗಳನ್ನು ಮುದ್ರಣವಾದಂತೆಲ್ಲಾ 8 ತಿಂಗಳಿಗೊಂದು ಭಾಗದಂತೆ ಚಂದಾದಾರರಿಗೆ ರಿಜಿಸ್ಟರ್ ಮಾಡಿಸಿ ಕಳುಹಿಸಲಾಗುವುದು.

ಮೈಸೂರು ಮತ್ತು ಬೆಂಗಳೂರನ್ನುಳಿದ ಪರಸ್ಥಳದ ಚಂದಾದಾರರು ರಿಜಿಸ್ಟರ್ ಖರ್ಚಿಗಾಗಿ ಪ್ರತ್ಯೇಕ 5 ರೂ. ಗಳನ್ನು ಕಳುಹಿಸಬೇಕಾಗುವುದು.

ಶಾಲಾ ಮತ್ತು ಕಾಲೇಜುಗಳ ಲೈಬ್ರರಿಗಳಿಗೆ 75 ರೂ. ಗಳು. ಟಪ್ಪಾಲು ಖರ್ಚು ಪ್ರತ್ಯೇಕ.

**ಗ್ರಂಥಕರ್ತ–ಪ್ರಕಾಶಕ.**

## SAMSKRITA–KANNADA DICTIONARY

### 500 Pages Each in Five Volumes

This *Dictionary* is now estimated to cover 2,500 pages instead of 2,000 pages as proposed before. Though the cost of printing is raised in recent times, the price of the *Dictionary* is fixed at Rs. 75 only for the full set of 2,500 pages which will be published in five volumes of 500 pages each, as it is the intention of the Author that this must be within the easy reach of all lovers of Samskrita and also as this publication is undertaken without any profit motive.

Persons intending to subscribe for this *Dictionary* are requested to pay the full amount in one lump in advance and get their names registered.

For those who subscribe for this *Dictionary* within the end of March 1962, it is proposed to reduce the price to Rs. 65.

The first volume of 500 pages is ready now and the rest of the volumes will be supplied to subscribers at intervals of 8 months each and they will be sent by registered post to them.

Subscribers outside Bangalore and Mysore will have to pay a sum of Rs. 5 extra for covering registration charges.

For Schools and College Libraries Rs. 75. (Postage extra.)

AUTHOR-EDITOR.

# GRANTS, SUBVENTIONS AND DONATIONS RECEIVED FOR THE PUBLICATION OF SAMSKRITA-KANNADA DICTIONARY "SHABDARTHAKAUSTHUBHA"

| | | Rs. |
|---|---|---|
| | **Donations** | |
| 1. | His Highness the Maharaja of Mysore | 2,000 |
| 2. | Her Highness the Maharani of Mysore | 2,000 |
| | **Government Grants** | |
| 1. | Government of India | 15,000 |
| 2. | Government of Mysore | 6,000 |
| 3. | Government of Hyderabad | 1,000 |
| | **Subventions** | |
| 1. | University of Mysore | 2,000 |
| 2. | Department of Public Instruction in Mysore | 500 |
| | **Donations** | |
| | (1) *Sri Mathams* | |
| 1. | Sri Parakala Swamy Matham, Mysore | 500 |
| 2. | Sri Bhandarakeri Swamy Matham, Udupi | 101 |
| 3. | Sri Pejawara Swamy Matham, Udupi | 101 |
| 4. | Sri Adamaru Swamy Matham, Udupi | 101 |
| 5. | Sri Shivakumara Swamigalavaru, Sri Siddhaganga Matham, Siddhaganga | 101 |
| | (2) *Philanthropic Public* | |
| 1. | Sri. K. Seetarama Rao, "Dasaprasad", Madras | 1,000 |
| 2. | ,, K. T. Appanna, Proprietor, Modern Hindu Hotel, Bangalore | 500 |
| 3. | ,, K. Srinivasulu, Proprietor, Seethalakshmi Hall, Bangalore | 501 |
| 4. | ,, Yadalam Nanjaiah Setty, Bangalore | 251 |
| 5. | ,, Arasappa, Proprietor, Srinivasa Weaving Factory, Bangalore | 251 |
| 6. | ,, Ramnarayan Chellaram & Sons Charitable Trust, Bangalore | 251 |
| 7. | ,, M. Rajagopalan, M. Srinivasacharlu & Co., Bangalore | 250 |
| 8. | ,, K. Gururajachar, Proprietor, "Hotel Tourist," Bangalore | 200 |
| 9. | Messrs. K. H. Shama Rao & Sons, Bangalore | 101 |
| 10. | Sri. T. Shama Iyengar, Retd. District and Sessions Judge, Bangalore | 50 |
| 11. | ,, M. V. Krishna Murthy, The Commission & General Agency, Bangalore | 50 |
| 12. | Messrs. Ganjam Nagappa & Sons, Bangalore | 51 |
| 13. | Messrs. Khode Eswarsa & Sons, Bangalore | 51 |
| 14. | Sri. S. Sajjana Rao Charities Funds, Bangalore | 50 |

CHAKRAVARTHI SRINIVASA GOPALACHARYA,
*Author-Editor.*

# ಕೆಲವು ಅಭಿಪ್ರಾಯಗಳು

PROF. B. VENKATESHACHAR

Basavangudi,
BANGALORE,
*Date* 22–10–1961.

It gives me great pleasure to recommend to the public Shri Chakravarthi Srinivasa Gopalacharya's *Samskrita-Kannada Dictionary* as a solid work of great merit useful to all Kannadigas in the study of Samskrita. The work is not a mere Dictionary but is more of the nature of an encyclopædia giving along with the meaning of a word all the grammatical and other information connected with it. All philosophical terms of Nyaya Sankhya, Vedantha and so on are fully explained. One important feature is the inclusion of the full inflexion of about one hundred representative verbal roots. Suitable quotations are given wherever necessary illustrating the use of the word under reference. I have no doubt that this work will be highly useful to all students of Samskrita.

(Sd.) B. VENKATESHACHAR.

*  *  *  *

K. GURU DUTT, I.A.S. (RETD.)
(*Retd. Director of Public Instruction, Mysore State,*
*President, The Mysore Samskrita Academy,*
*Retd. Chairman, Mysore State Electricity Board,*
*President, Mythic Society, etc.*)

"Pratibha",
Shanti Nagar,
BANGALORE–1,
29*th October* 1961.

Pandit Shri Chakravarthi Srinivasa Gopalacharya is well known to me for quite a number of years. From the time I was Director of Public Instruction, Mysore State, over a decade ago, I have been watching all the stages of his incessant labours towards completing his great *Samskrita-Kannada Dictionary*, and it is with great pleasure that I now see the first volume in print. Four more volumes will cover the work fully. The need for such a work has been acutely felt in all circles—lay and scholarly—for a long time, and its appearance now is very timely. The Author-Editor has brought to bear upon it all his vast erudition and has produced a Dictionary which is not a mere hold-all for explanatory synonyms for words, but includes valuable information of philosophical, grammatical and technical import, supported by apposite quotations illustrating the use and context of terms. The Author has laid the whole Kannada Country under a debt of scholarly obligation. Few can know what endless pains he has taken and what sacrifices he has made for completion of this, his life-work. He can be repaid only by way of financial and other assistance for the publication of the entire work, as well as by encouraging such practical use of it by large numbers of students as will conduce to a better knowledge of Samskrita, and consequently to the consolidation and development of the Kannada Language itself. I most heartily congratulate Shri Chakravarthi Srinivasa Gopalacharya and wish his great enterprise adequate fulfilment.

(Sd.) K. GURU DUTT.

**उष्णीषपट्ट ಉಷ್ಣೀಷಪಟ್ಟ** (पु०) ರುಮಾಲಿನ ಬಟ್ಟೆ, ರುಮಾಲುಸುತ್ತುವ ವಸ್ತ್ರ. उष्णीषार्थं पट्टः। "चपलगणहृतोष्णीषपट्टाः पतन्ति" रत्ना० १-३।

**उष्णीषिन् ಉಷ್ಣೀಷಿನ್** (पु०) 1. ಈಶ್ವರ, ಮಹಾದೇವ. (वि०) 2. ರುಮಾಲು ಧರಿಸಿರುವ. "उष्णीषमस्यास्ति "इनिः" (५-२-११५)।

**उष्णोदक ಉಷ್ಣೋದಕ** (न०) ಬಿಸಿನೀರು, ಕಾಯಿಸಲ್ಪಟ್ಟ ನೀರು. उष्णमुदकम्। ನೀರು ಎಂಟನೆಯ ಒಂದು ಭಾಗ, ನಾಲ್ಕನೆಯ ಒಂದು ಭಾಗ ಅಥವಾ ಅರ್ಧಭಾಗ ಇಳಿಯುವಂತೆ ಇಂಗಿಸಲ್ಪಟ್ಟರೆ ಅಥವಾ ಕುದಿಯಿಸಲ್ಪಟ್ಟರೆ ಉಷ್ಣೋದಕವೆನಿಸುವುದು. "अष्टमेनांशशोषेण चतुर्थेनार्धकेन वा। अथवा क्वथनेनैव सिद्धमुष्णोदकं वदेत्" भावप्र०। ಉಷ್ಣೋದಕದ ಗುಣಗಳು: "श्लेष्मामवातमेदोघ्नं बस्तिशोधनदीपनम्। कासश्वासज्वरान् हन्ति पीतमुष्णोदकं निशि। क्वाथ्यमानं तु निर्वेगं निष्फेनं निर्मलं तथा। अर्धावशिष्टं यत्तोयं तदुष्णोदकमुच्यते"भावप्र०। "तत्पादहीनं पित्तघ्नमर्धहीनं तु वातनुत्। त्रिपादहीनं श्लेष्मघ्नं संग्राह्याग्निकरं लघु" ಇತ್ಯಾದಿ. ರಾತ್ರಿ ಕುಡಿಯಲ್ಪಟ್ಟ ಉಷ್ಣೋದಕವು ಕಫ, ಆಮ ಮತ್ತು ವಾತಗಳನ್ನು ಹೋಗಲಾಡಿಸುವುದು. ವಸ್ತಿಯನ್ನು ಶುದ್ಧಿಮಾಡಿ ಅಗ್ನಿವೃದ್ಧಿಯನ್ನುಂಟುಮಾಡುವುದು. ಮತ್ತು ಕಾಸ ಶ್ವಾಸ ಮತ್ತು ಜ್ವರವನ್ನು ವಾಸಿಮಾಡುವುದು.

**उष्णोपगम ಉಷ್ಣೋಪಗಮ** (पु०) ಗ್ರೀಷ್ಮಋತು, ಬೇಸಿಗೆಯ ಕಾಲ. उष्णस्य उपगमोऽत्र।

**उष्म ಉಷ್ಮ** (पु०) 1. ಗ್ರೀಷ್ಮಋತು, ಬೇಸಿಗೆಯ ಕಾಲ. उष (दाहे) "मक्" बाहु०। 2. ಕೋಪ, ಸಿಟ್ಟು. 3. ಔತ್ಸುಕ್ಯ, ಕುತೂಹಲ.

**उष्मक ಉಷ್ಮಕ** (पु०) ಗ್ರೀಷ್ಮಋತು, ಬೇಸಿಗೆಯ ಕಾಲ. उष्म स्वार्थे "कन्"।

**उष्मन् ಉಷ್ಮನ್** (पु०) 1. ಬಿಸಿ, ಶಾಖ. उष (दाहे) "मनिन्" (उ० ४-१४४)। "निवेदितं निश्वसितेन सोष्मणा मनस्तु मे संशयमेव गाहते" कुमा० ५-४६। 2. ಹಬೆ, ಆವಿ. "तपात्यये वारिभिरुक्षिता नवैर्भुवा सहोष्माणममुञ्चदूर्ध्वगम्" कुमा० ५-२३। 3. ಗ್ರೀಷ್ಮಋತು, ಬೇಸಿಗೆಯ ಕಾಲ. "उष्मा पित्तादृते नास्ति ज्वरो नास्त्युष्मणा विना। तस्मात्पित्तविरुद्धानि त्यजेत् पित्ताधिकेऽधिकम्" वाग्भ० चिकित्सा०। 4. श, ष, स, ह ವರ್ಣಗಳು. "शषसहा" ऊष्माणः" सि० कौ०।

**उष्मागम ಉಷ್ಮಾಗಮ** (पु०) ಗ್ರೀಷ್ಮಋತು, ಬೇಸಿಗೆಯ ಕಾಲ. उष्मा आगमोऽत्र।

**उस्र ಉಸ್ರ** (पु०) 1. ರಶ್ಮಿ, ಕಿರಣ. वस (निवासे) "रक्" (उ० २-१३)। "उस्राणां व्यभिचरतीव सप्तसप्तेः पर्यस्यन्निव निचयः सहस्रसंख्याम्" किरा० ५-३४। 2. ಪ್ರವಾಹ, ನೀರು ಹರಿಯುವಿಕೆ. "उस्रः स्रवः प्रस्रवणम्" अभि० चि०। 3. ಎತ್ತು, ವೃಷಭ. (स्त्री०) **–स्रा –ಸ್ರಾ.** 1. ಆಕಳು, ಹಸು. 2. ಇಲಿಯಾಲದ ಮರ. "उस्रा गव्युपचित्रायामुस्रस्तु किरणे स्मृतः" विश्व०। "उस्रो वृषे च किरणेऽप्युस्रार्जुन्युपचित्रयोः" मेदि०।

**उस्रिक ಉಸ್ರಿಕ** (पु०) 1. ಚಿಕ್ಕ ಎತ್ತು. 2. ಮುದಿ ಎತ್ತು. (स्त्री०) **–का –ಕಾ.** ಸ್ವಲ್ಪ ಹಾಲುಕೊಡುವ ಆಕಳು.

**उस्रिय ಉಸ್ರಿಯ** (पु०) ಮುದಿ ಎತ್ತು. (स्त्री०) **–या –ಯಾ.** ಆಕಳು, ಹಸು. "उस्रियाणां क्षीरमुत्सारयन्तीम्"।

**उह ಉಹ** (अव्य०) 1. ಸಂಬೋಧನೆ. 2. ಕರೆ, ಆಹ್ವಾನ. 3. ಅವಧಾರಣೆ, ನಿಶ್ಚಯ.

**उहू ಉಹೂ** (स्त्री०) ಭಯ ಮತ್ತು ದುಃಖಸೂಚಕವಾದ ಒಂದು ಶಬ್ದ. उहिर् (अर्दने) "कूः" बाहु०। "नखानि विधुशङ्कया करतलेन तद्व्यावृणोत् ततः किसलयभ्रमात् करमथाक्षिपद्दूरतः। ततो वलयशिञ्जिते भ्रमरगुञ्जिताशङ्कया उहूरिति कुहूरवध्वनिभियाऽपतन्मूर्च्छिता"।

**उह्यमान ಉಹ್ಯಮಾನ** (वि०) ವಹಿಸಲ್ಪಡುವ, ಹೊರಲ್ಪಡುವ. वह (प्रापणे) कर्म० "शानच्" (३-२-१२४)। "यथोह्यमानः खलु भोगभोजिना प्रसह्य वैरोचनिजस्य पत्तनम्" नैष० १-३२।

**उह्ल ಉಹ್ರ** (पु०) ವೃಷಭ, ಎತ್ತು. उहिर् (अर्दने) "रक्" बाहु०।

इति "उ" कारादिपदार्थनिरूपणम्

1644—54. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರವರಾದ
ಟಿ. ಕೆ. ಬಾಲಕೃಷ್ಣನ್‌ರವರು ಮುದ್ರಿಸಿರುವರು.